


# ಹಿಂಗಾರ

## ಅರೆಬಾಸೆ ತ್ರೈಮಾಸಿಕ



ಸಂಪುಟ : 4 ಸಂಚಿಕೆ : 8 ದಿನಾಂಕ : 31-12-2021 ಬೆಲೆ : ರೂ. 20

ಅಕ್ಟೋಬರ್ - ನವಂಬರ್ - ಡಿಸೆಂಬರ್ 2021



ಕರ್ನಾಟಕ
ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ




ಸುಳ್ಯದ ಎನ್.ಎಂ. ಕಾಲೇಜ್‌ಲಿ ಅರೆಭಾಷೆ ದಿನಾಚರಣೆ



ಸುಬ್ರಹ್ಮಣ್ಯದ ಕೆ.ಎಸ್.ಎಸ್. ಕಾಲೇಜ್‌ಲಿ ಚಲನಚಿತ್ರೋತ್ಸವ




ಮಂಗಳೂರುಲಿ ಅರೆಭಾಷೆ ಯಕ್ಷಗಾನ ತಾಳಮದ್ದಲೆ



ಮಂಗಳೂರುಲಿ ನಡ್ಡ ಅರೆಭಾಷೆ ದಿನಾಚರಣೆ



ಮರಗೋಡ್‌ಲಿ ಅರೆಭಾಷೆ ದಿನಾಚರಣೆ



ಬೆಂಗಳೂರುಲಿ ನಡ್ಡ ಸಂಸ್ಕೃತಿ ಶಿಬಿರದ ಸಮರೋಪ



ಸುಳ್ಯದ ಎನ್.ಎಂ. ಕಾಲೇಜ್‌ಲಿ ಅರೆಭಾಷೆ ದಿನಾಚರಣೆ



ಪುತ್ತೂರ್‌ನ ಬೆಟ್ಟಂಪಾಡಿ ಕಾಲೇಜ್‌ಲಿ ಕನ್ನಡ ಚಲನಚಿತ್ರೋತ್ಸವ



ಬೆಳ್ತಂಗಡಿಲಿ ನಡ್ಡ ಅರೆಭಾಷೆ ದಿನಾಚರಣೆ



ದೇವಸ್ತೂರುಲಿ ಅರೆಭಾಷೆ ದಿನಾಚರಣೆ




**ಕರ್ನಾಟಕ ಸರ್ಕಾರ**
**ಕನ್ನಡ ಮತ್ತು ಸಂಸ್ಕೃತಿ ಇಲಾಖೆ**



**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**
**ಮಡಿಕೇರಿ**

# ಹಿಂಗಾರ

**ಅರೆಭಾಷೆ ತ್ರೈಮಾಸಿಕ**

ಸಂಪುಟ : 4 ಸಂಚಿಕೆ : 8
ದಿನಾಂಕ : 30–12–2021 ಕೊಡಗು ರೂ. 20

ಪ್ರಧಾನ ಸಂಪಾದಕರ್
**ಲಕ್ಷ್ಮೀನಾರಾಯಣ ಕಜೆಗದ್ದೆ**

ಸಂಪಾದಕರ್
**ಡಾ. ದಯಾನಂದ ಕೂಡಕಂಡಿ**

ಸಹಸಂಪಾದಕರ್
**ಪುರುಷೋತ್ತಮ ಕಿರ್ಲಾಯ**

| | |
|---|---|
| **HINGARA** | **ಹಿಂಗಾರ** |
| A Quarterly Magazine | ತ್ರೈಮಾಸಿಕ ಪತ್ರಿಕೆ |
| Published by | ಪ್ರಕಾಶಕರು |
| **Karnataka Arebhase Samskruthi Mathu Sahitya Academy** | **ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ** |
| Coffee Krip, 1st Floor | ಕಾಫಿ ಕೃಪಾ, ಒಂದನೇ ಮಹಡಿ, |
| Rajaseat Rd, Madikeri - 571 201 | ರಾಜಸೀಟ್ ರಸ್ತೆ, ಮಡಿಕೇರಿ–571201 |
| Ph : 08272-223055 | ದೂರವಾಣಿ : 08272–223055 |
| arebaseacademy@gmail.ocm | arebaseacademy@gmail.ocm |
| www.arebaseacademy.com | www.arebaseacademy.com |
| Chief Editor | ಪ್ರಧಾನ ಸಂಪಾದಕರ್ |
| **Lakshminarayana Kajegadhe** | **ಲಕ್ಷ್ಮೀನಾರಾಯಣ ಕಜೆಗದ್ದೆ** |
| Editor | ಸಂಪಾದಕರ್ |
| **Dr. Dayananda Kudakandi** | **ಡಾ. ದಯಾನಂದ ಕೂಡಕಂಡಿ** |
| Managing Editor | ವ್ಯವಸ್ಥಾಪಕ ಸಂಪಾದಕರ್ |
| **Chinnaswamy** | **ಚಿನ್ನಸ್ವಾಮಿ** |
| Cover Page Photo | ಮುಖಪುಟ ಚಿತ್ರ |
| **Gangadhara Murthy** | **ಗಂಗಾಧರ ಮೂರ್ತಿ** |
| Printed at | ಮುದ್ರಣ |
| **Aakrithi Prints** | **ಆಕೃತಿ ಪ್ರಿಂಟ್ಸ್** |
| Mangaluru | ಮಂಗಳೂರು |
| Ph. 0824-2972002 | ದೂರವಾಣಿ : 0824–2972002 |
| Pages : 80 | ಪುಟಗಳು : 80 |
| Copies : 1700 | ಪ್ರತಿಗಳು : 1700 |
| Vol : 4 - 8 | ಸಂಪುಟ 4 ಸಂಚಿಕೆ 8 |
| Period : October to December | ಅಕ್ಟೋಬರ್ – ಡಿಸೆಂಬರ್ |
| Price : Rs. 20 | ಬೆಲೆ : ರೂ. 20/– |
| 3 year subscription : | ತ್ರೈವಾರ್ಷಿಕ ಚಂದಾ : |
| Rs. 200 | ರೂ. 200 |



# ಅಧ್ಯಕ್ಷರ ಮಾತ್

ಎಲ್ಲವುಕೆ ನಮಸ್ಕಾರ

ದಶವರ್ಸದ ನೆಂಪುಗೆ ಹತ್ತ್‌ಊರುಲಿ ಹಮ್ಮಿಕೊಂಡಂತ ನಮ್ಮ ಸಂಸ್ಕೃತಿ ಶಿಬಿರಕ್ಕೆ ಸಿಕ್ಕ ಜನರ ಸ್ಪಂದನೆಂದ ಅಕ್ಟೋಬರ್ ತಿಂಗಳ್‌ಲಿನೂ ಇದ್ ಮುಂದುವರ್‌ದ್‌ಕಂಡ್ ಹೋತ್. ಹೊರ ಊರುಗಳ್‌ಲಿ ನೆಲೆ ನಿಂತ ಅರೆಬಾಸಿಗರಿಗೆ ನಮ್ಮ ಬಾಸೆ, ಸಂಸ್ಕೃತಿಯ ಕುರಿತಾದ ಪ್ರೀತಿ, ಕಾಳಜಿ, ಅವರೊಟ್ಟಿಗೆ ಮತ್ತಷ್ಟ್ ಕೈ ಜೋಡ್ಸಿಕೆ ನಮಿಗೆ ಇಂಬು ಕೊಟ್ಟತ್. ಹಂಗೆನೇ ಅಕ್ಟೋಬರ್ 31ಕ್ಕೆ ಅಮರ ಸುಳ್ಯದ ಹೋರಾಟಗಾರ ಗುಡ್ಡೆ ಮನೆ ಅಪ್ಪಯ್ಯ ಗೌಡರ ಸಂಸ್ಮರಣಾ ಕಾರ್ಯಕ್ರಮನ ಆಚರಿಸಿದೊ. ಸಮಾಜದ ಬಂದುಬಾಂದವು ಹಾಜರಿದ್ದ್ ಕಾರ್ಯಕ್ರಮದ ಕಳೆ ಹೆಚ್ಚಿಸಿದೊ. ಅದರೊಟ್ಟಿಗೆ ರಾಜ್ಯೋತ್ಸವದ ಪ್ರಯುಕ್ತ ನಮ್ಮ ಪ್ರದೇಸದವುಕೆ ಸದಬಿರುಚಿಯ ಚಲನಚಿತ್ರ ತೋರ್ಸೋಕ್ ತೇಳುವ ಕಾರಣಕ್ಕೆ ಏಳ್ ಕಡೆ ನಾವು ಚಿತ್ರ ಪ್ರದರ್ಶನ ಇಸಿಕೊಂಡೊ. ನಮ್ಮ ಅರೆಬಾಸಿಗರ್ ಅಂತಹ ಚಿತ್ರ ನೋಡಿ ಆ ರೀತಿನ ಚಿತ್ರಗ ನಮ್ಮಅರೆಬಾಸೆಲಿ ಸನಾ ಬರೋಕುಂತೇಳುವಂತದ್ದ್ ಇದರ ಹಿಂದೆನ ಉದ್ದೇಸ. ಕೊಡಗ್‌ಲಿ ನಿರೀಕ್ಷೆಗೂ ಮೀರಿ ಜನ ಸೇರ್‌ದ್ ನಿಜಕ್ಕೂ ಕುಸಿ ಕೊಟ್ಟತ್. ಈ ಹಿಂದೆ ತಿಳಿಸಿದಾಂಗೆ ಸುಬ್ರಹ್ಮಣ್ಯದ ಕೆ.ಎಸ್. ಎಸ್. ಕಾಲೇಜಿನ ಕುಸುಮ ಸಾರಂಗ ನಾಟಕ ತಂಡಲಿ ಸಿದ್ದ ಪಡ್ಸಿದ 'ಹೊತ್ತ್ ಕಂತ್‌ಕನ' ನಾಟಕ ನವೆಂಬರ್ ತಿಂಗಳ್‌ಲಿ ಪ್ರದರ್ಶನ ಕಂಡತ್. ಇಂಗ್ಲೀಷ್ ನಾಟಕಕಾರ ಶೇಕ್ಸ್‌ಪಿಯರ್‌ನ

ನಾಟಕನ ನಿರ್ದೇಶಕ ಪ್ರವೀಣ ಎಡಮಂಗಲ ಅವರ ಸಾರಥ್ಯಲಿ ಮಕ್ಕಳೇ ಸೇರಿಕಂಡ್ ಆ ಕತೆನ ಅರೆಬಾಸೆಯ ಪರಿಸರಕ್ಕೆ ಹೊಂದಿಕಣ್‌ವಂಗೆ ಅನುವಾದ ಮಾಡಿ, ರಂಗಕ್ಕೆ ತಂದದ್ದ್ ನಿಜಕ್ಕೂ ವಿಸೇಸ. ಗ್ರಾಮೀಣ ಪ್ರತಿಭೆಗ ಹೊರಬಾಕೆ ಇದ್ ಕಾರಣ ಆತ್. ಇಲ್ಲದಿದ್ದರೆ  ಗ್ರಾಮೀಣ ಬಡ ಮಕ್ಕಳಿಗೆ ದುಡ್ಡು ಕೊಟ್ಟು ತರಬೇತಿ ಪಡ್ಕಣುವ ಶಕ್ತಿ ಇಲ್ಲೆ. ಹಿಂಗಿರ್‌ಕನ ಅಕಾಡೆಮಿ ಕಡೆಯಿಂದ ಮಕ್ಕಳ ಅಭಿರುಚಿನ ಹೆಚ್ಚಿಸಿಕೆ ಪೂರಕವಾದಂತ ಕೆಲ್ಸ ಆವುಟು ಹೇಳುದು ಕುಸಿನ ಸಂಗತಿ. ಆದರೆ ಮಕ್ಕಳಿಗೆ ತರಗತಿಗ ಸುರುವಾದ ಕಾರಣ ಹಂಗೆ ಅಕಾಲಿಕ ಮಳೆ ಮತ್ತೆ ಹಣದ ಕೊರತೆಂದ ನಮಿಗೆ ಪುನರ್ ಪ್ರದರ್ಸನ ಮಾಡಿಕೆ ಸಾದ್ಯ ಆತ್ಲೆ. ಮುಂದಿನ ದಿನಗಳ್‌ಲಿ ಇದರ ಬಗ್ಗೆ ಯೋಚನೆ ಉಟ್ಟು.

ಡಿಸಂಬರ್ ಹದಿನೈದಕ್ಕೆ ಅಕಾಡೆಮಿ ಸ್ಥಾಪನಾ ದಿನ. ಈ ದಿನನ ತುಂಬ ಪ್ರೀತಿಯಿಂದ ನಮ್ಮ ನಿರೀಕ್ಷೆಗೂ ಮೀರಿ ಅರೆಬಾಸಿಗರ್ ಹದಿನೇಳ್ ಊರ್‌ಲಿ ಬೇರೆ ಬೇರೆ ಕಡೆಗಳ್‌ಲಿ ಕಾರ್ಯಕ್ರಮ ಮಾಡ್ದೊ. ಬಾಸೆನ ಬಗ್ಗೆ ಕೀಳರಿಮೆ ಹೋಗಲಾಡಿಸಿ, ಈ ರೀತಿಲಿ ನಮ್ಮ ಬಾಸೆ, ಸಂಸ್ಕೃತಿಯ ಉನ್ನತಿಗೆ ಅಕಾಡೆಮಿ ಒಟ್ಟಿಗೆ ಸಮುದಾಯದವು ಕೈ ಜೋಡಿಸಿ ಬೆಂಬಲ ಕೊಡುತ್ತಿರ್‌ದು ನಮಗೆ ಇನ್ನಷ್ಟ್ ಕೆಲ್ಸ ಮಾಡಿಕೆ ಹುರ್‌ಪ್ ಬಂದದೆ. ಈ ಬೆಂಬಲ ಹಿಂಗೇ ಇರಲಿ.

ಎಂದ್‌ನಾಂಗೆ ಹಿಂಗಾರ ನಿಮ್ಮ ಕೈಲಿ. ಓದಿ, ಬರೆಯನಿ, ಅಬಿಪ್ರಾಯಿಸಿ.

ವಂದನೆಗ

**ಲಕ್ಷ್ಮೀನಾರಾಯಣ ಕಜೆಗದ್ದೆ**



# ಸಂಪಾದಕೀಯ

ಅರೆಬಾಸೆನ ಹಿಂಗಾರ ತ್ರೈಮಾಸಿಕ ಪುಸ್ತಕನ ಓದ್‌ವ ಪ್ರೀತಿಯ ಎಲ್ಲ ಅರೆಬಾಸೆ ಓದ್‌ಗರಿಗೆ ನಮಸ್ಕಾರಗ. ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಸುರು ಆಗಿ ಹತ್ತ್ ವರ್ಷ ಆತ್. ಈ ಹತ್ತ್ ವರ್ಷಲಿ ಅರೆಬಾಸೆ ಮತ್ತೆ ಸಂಸ್ಕೃತಿನ ಉಳ್ಸಿಕೆ ಅಕಾಡಮಿ ತುಂಬಾ ಕೆಲ್ಸ ಮಾಡ್ಯೂಟು. ಅಕಾಡೆಮಿನ ಎಲ್ಲಾ ಕೆಲ್ಸಗಳನ್ನ ಮಾಡಿಕೆ ಅರೆಬಾಸೆ ಮತ್ತೆ ಸಂಸ್ಕೃತಿನ ಇಷ್ಟಪಡ್‌ವ ಕಾರಣ. ಜೊತೆಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿಂದ ಹೊರತರ್‌ತ್ತಿರ್‌ವ ಹಿಂಗಾರ ತ್ರೈಮಾಸಿಕನ ಚಂದಾದಾರ್‍ರಾಗಿ, ನಿರಂತರಾಗಿ ಓದಿಕಂಡ್ ಮೌಲ್ಯದ ಬರಹಗಳ್ನ ಮತ್ತೆ ಒಳ್ಳ ಸಲಹೆಗಳ್ನ ಕೊಟ್ಟ್ ಸಹಕರಿಸ್ತಿರುವ ನಿಮಿಗೆ ಹೃದಯ ತುಂಬಿದ ಧನ್ಯವಾದಗ.

ಈ ಹಿಂಗಾರ ತ್ರೈಮಾಸಿಕ ಪುಸ್ತಕ ನಾಲ್ಕನೆ ಸುಂಪುಟದ ಎಂಟನೆ ಸಂಚಿಕೆ. ಈ ಸಂಚಿಕೆಲಿ 2021ರ ಅಕ್ಟೋಬರ್‌ಂದ ಡಿಸಂಬರ್ ತಿಂಗಳ ಕೊನೆವರೆಗೆ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ನಡ್‌ಸಿದ ಕಾರ್ಯಕ್ರಮಗಳನ್ನ ಸಂಕಲಿಸ್ಯೊಳೊ.

ಈ ಸಂಚಿಕೆಲಿ ವ್ಯಕ್ತಿ ಪರಿಚಯ ವಿಭಾಗಲಿ ಕಲಾವಿದರ ರೂಪಿಸ್‌ವ ಕಲಾ ಶಿಕ್ಷಕ ಎಂ.ಎಸ್. ಪುರುಷೋತ್ತಮ ಅವ್ರ ಪರಿಚಯನ ನೂತನ ಎಂ.ಜೆ, ಸಂಸ್ಕೃತಿ ದರ್ಪಣಲಿ ಕೊಡಗು ಸಂಗಾತಿ ಪತ್ರಿಕೆನ ಮೂಲಕ ಅರೆಬಾಸೆ ಬೆಳ್ಸಿದ ಮಾಂತ್ರಿಕ ಪಟ್ಟಡ ಪ್ರಭಾಕರ ಅವ್ರ ಪರಿಚಯನ ಡಾ. ಪುರುಷೋತ್ತಮ ಕರಂಗಲ್ಲು, ಅನುಭವ ವಿಭಾಗಲಿ ಕುಯಿಂತೋಡು ದಾಮೋದರ ಅವ್ರ 'ಮನೆ ಮನಗಳ ಕಲಾಕುಂಚ' ಮತ್ತೆ ಕಾವೇರಿಮನೆ ಪ್ರೊ. ಬೋಜಪ್ಪ ಅವ್ರ 'ಕರ್ನಾಟಕದ ಪ್ರಮುಖ ಆಹಾರ ಬೆಳೆಗೊಂದು ಕರೆಗಂಟೆ' ತೇಳುವ ಅನುಭವನ ಹಂಚಿಕೊಂಡೊಳೊ. ವೈಚಾರಿಕ ವಿಭಾಗಲಿ ಕೊಟ್ಟಕೇರಿಯನ ಲೀಲಾ ದಯಾನಂದ ಅವ್ರ 'ಪೋರ್ಲುಲಿ ಮಾತಾಡಿಕೆ ಬೊತ್ತಾ?'ತೇಳ್‌ವ ವೈಚಾರಿಕ ಬರವಣಿಗೆನ ಪ್ರಕಟಿಸ್ಯೊಳೊ.

ಕಥಾ ಜೊಂಪೆ ವಿಭಾಗಲಿ ಅಕ್ಷತಾರಾಜ್ ಪೆರ್ಲ ಅವ್ರ 'ದುಬಾಯಿ

ಹೈದನ ನೆಟ್ ಕಡ್ಡಿ ಶಾಲೆ' ಮತ್ತೆ ಕಾರ್ತಿಕ್ ಪದೇಲವು ಬರ್ದ 'ಗುಡ್ಡು ಜೆಡೆನ, ಉದ್ದ ಕೊಡೆಕಾಲ್ನ ಗೂಡೆ.' ಹಾಂಗೆ ಪುರಾಣ ಕಥಾ ಜೊಂಪೆಲಿ ಕವಿತಾ ಕೊಲ್ಲನ್ರೂಜಿನೆವು ಬರ್ದ 'ನಾಕೂರುಕಯವೆಂಬ ಮುಕ್ತ ಆರಾಧನ ಕ್ಷೇತ್ರ' ನೈಜ ಕಥೆ ವಿಭಾಗಲಿ ವಾರಿಜ ಸೂರ್ತಲೆವು ಬರ್ದ 'ಪಂಡ್ನ ಕಾಲಲಿ ನಡ್ದ ಸತ್ಯದ ಕಥೆ'ನ ಪ್ರಕಟಿಸ್ಯೊಳೊ.

ಅಕಾಡೆಮಿನ ವತಿಂದ ನಡ್ದ ಅರೆಬಾಸೆ ಲಲಿತ ಪ್ರಬಂಧ ಸ್ಪರ್ಧೆಲಿ ಜೈನೀರಾ ಕವಿತಾವು ಬರ್ದ 'ನೋಡಿಕೆ ಹೋದುಲೆನಾ' ಮತ್ತೆ ಲೀಲಾ ದಾಮೋದರವು ಬರ್ದ 'ರೊಟ್ಟಿ ಸುಟ್ಟಾತ್'ತೇಳುವ ಬರವಣಿಗೆ ಮೂರ್ನೆ ಬಹುಮಾನನ ಹಂಚಿಕೊಂಡೊಳೊ. ಅದನ್ನ ಇಲ್ಲಿ ಪ್ರಕಟಿಸ್ಯೊಳೊ. ಕವನ ವಿಭಾಗಲಿ ಅಪೂರ್ವ ಚೇತನ್ ಪೆರಂದೋಡಿವು ಬರ್ದ 'ಅವ್ವನ ಬೊದ್ಕ್', ಶಿವದೇವಿ ಅವನೀಶಚಂದ್ರವು ಬರ್ದ 'ಬೆಳ್ಳಿ ಮೋಡಲಿ ತೆಲಿ', ಮೂಟೇರ ಕೆ. ಗೋಪಾಲಕೃಷ್ಣವು ಬರ್ದ 'ಕೊಡ್ಗ್‌ನ ಗೂಡೆ' ಮತ್ತೆ ಬೈಲೇರ ಭಾನು ಅಶೋಕ್ ಅವ್ರ 'ನಾವಿರೊಕು ಇವನಂಗೆ'ತೇಳುವ ಕವನನ ಪ್ರಕಟಿಸ್ಯೊಳೊ. ಬನ್ನಿ ಓದೋಮ ತೇಳುವ ಅಂಕಣಲಿ ಕನ್ನಡದ ದೊಡ್ಡ ಕತೆಗಾರ, ಕಾದಂಬರಿಕಾರ ಶ್ರೀ ಕೃಷ್ಣ ಆಲನಹಳ್ಳಿವ್ರ 'ಗೋಡೆ' ಕಥಾಸಂಕಲನಂದ ತೆಕಂಡ 'ಮಾಮರವೂ ಮಾಪಿಳ್ಳೆ'ತೇಳುವ ಕತೆನ ಒಂದ್ ತುಣುಕ್‌ನ ಪ್ರಕಟಿಸ್ಯೊಳೊ. ತೆಕ್ಕಡೆ ಕುಮಾರಸ್ವಾಮಿನವು ನಮ್ಮ ಜೀವನದ ಮುಖ್ಯ ಆದ ಪರಿಕರ 'ಸೇರ್'ನ ಬಗ್ಗೆ ಮಾಹಿತಿನ ಈ ಸಂಚಿಕೆಲಿ ಕೊಟ್ಟೊಳೊ.

ಸಂಚಿಕೆನ ಹೊರತಾಕೆ ಅಕಾಡೆಮಿನ ಅಧ್ಯಕ್ಷರ್, ಸಹ ಸಂಪಾದಕರ್, ಸರ್ವ ಸದಸ್ಯರ್ ಮತ್ತೆ ರಿಜಿಸ್ಟ್ರಾರ್ ಸಹಕರಿಸ್ಯೊಳೊ. ಬರಹಗಾರರ್ ತಮ್ಮ ಅಮೂಲ್ಯವಾದ ಬರವಣೆಗೆಗಳನ್ನ ನೀಡಿ ಸಂಚಿಕೆನ ಮೆರ್‌ಗ್‌ನ ಜಾಸ್ತಿ ಮಾಡ್ಯೊಳೊ. ಪ್ರತಿ ತಿದ್ದುವಲ್ಲಿ ಸಂಪಾದಕ ಮಂಡಳಿನ ಸಹಸಂಪಾದಕರಾದ ಪುರೊಷೋತ್ತಮ ಕಿರ್ಲಾಯವು ಹಾಂಗೇ ಎಲ್ಲ ಸದಸ್ಯರ್‌ಗ ಕೈ ಜೋಡಿಸ್ಯೊಳೊ. ಚಿತ್ರಕಲಾ ಶಿಬಿರಲಿ ಗಂಗಾಧರ ಮೂರ್ತಿಯವು ಬಿಡ್‌ಸಿದ ಚಿತ್ರನಮುಖಪುಟಲಿ ಹಾಕ್ಯೊಳೊ. ಆಕೃತಿ ಪ್ರಿಂಟ್ಸ್, ಮಂಗಳೂರು ಇವು ಲಾಯ್ಕಲಿ ಮುದ್ರಿಸಿ ಸಹಕರಿಸ್ಯೊಳೊ. ಸಂಚಿಕೆನ ಪ್ರಕಟಿಸಿಕೆ ಸಹಕರ್‌ಸಿದ ಎಲ್ಲವ್ಕೆ ಹೃದಯ ತುಂಬಿದ ಧನ್ಯವಾದಗಳ್‌ನ ಅರ್ಪಿಸಿನೆ.

ದಿನಾಂಕ: 31.12.2021

**ಡಾ. ದಯಾನಂದ ಕೂಡಕಂಡಿ**
ಸಂಪಾದಕರ್

| |
|---|
| ಪ್ರಕಟ ಆದ ಬರವಣೆಗೆಗೆ ಆಯಾ ಬರಹಗಾರರೆ ಜವಾಬ್ದಾರರ್ |

# ಹಿಂಗಾರ ಒಡ್ಸ್‌ಕನ




# ಕಲಾವಿದರ ರೂಪಿಸ್‌ವ ಕಲಾಶಿಕ್ಷಕ ಎಂ.ಎಸ್. ಪುರುಷೋತ್ತಮ

● **ನೂತನಾ ಎಂ.ಜೆ**



ಪ್ರತಿಬಾವಂತ ಕಲೆಗಾರರ್‌ಲಿ ಕೆಲವು ಜನ ಕಲೆಲಿ ಸಾಕಷ್ಟ್ ಸಾದನೆ ಮಾಡಿ ಕೀರ್ತಿನ ಶಿಕರಕ್ಕೆ ಏರಿ ಪ್ರಶಸ್ತಿನ ತಕಂಡವೆ. ಇನ್ನ್ ಕೆಲವು ಜನ ಕಲೆನ ದುಡ್ಡು ಮಾಡಿಕ್ಕನೇ ಉಪಯೋಗಿಸ್ಕಂಡ್ ಬೇಕಾದಷ್ಟ್ ಸಂಪಾದನೆ ಮಾಡಿಕಂಡವೆ. ಆದರೆ ಹೆಸ್ರ್, ದುಡ್ಡು, ಪ್ರಚಾರ ಯಾವ್ದರನೂ ಬಯ್ಸದೆ ಯಾವ ಸ್ವಾರ್ಥನೂ ಇಲ್ಲದೆ ಸಾವಿರಾರ್ ಜನಕ್ಕೆ ಅವ್‌ಕೆ ಗೊತ್ತಿರುವ ಕಲೆನ ಕಲ್ಸಿ ಆತ್ಮ ತೃಪ್ತಿ ಪಡ್‌ಕಂಬ ಮಾಸ್ಟ್ರಗ ಅಲ್ಲಲ್ಲಿ ಕಾಂಬಕ್ಕೆ ಸಿಕ್ಕುವೆ. ಇಂತವರ ಸಾಲ್‌ಲಿ ಕಾಂಬಕ್ಕೆ ಸಿಕ್ಕುವ ಒಬ್ಬ ಮಾಸ್ಟ್ರ ತೇಳಿರೆ ಅವು ಎಂ. ಎಸ್. ಪುರುಷೋತ್ತಮ.

ಸುಳ್ಯ ತಾಲೂಕುನ ಮೋಂಟಡ್ಕ ಮನೆತನದ ದಿ. ಶೇಷಪ್ಪ ಗೌಡ ಮತ್ತೆ ದಿ. ವೆಂಕಮ್ಮ ಇವರ ಮಂಙನೇ ಪುರುಷೋತ್ತಮ. ಪುತ್ತೂರ್‌ಲಿರುವ ಸಂತ ಫಿಲೋಮಿನ ಹೈಸ್ಕೂಲ್‌ಲಿ 42 ವರ್ಷ ಯಾವ್ದೇ ಪ್ರಚಾರ ಸಾವಿರಾರ್ ಮಕ್ಕಳಿಗೆ ಚಿತ್ರಕಲೆನ ಕಲ್ಸಿಕಂಡ್ ಬಂದೊವು. ಅವರ ಮಾರ್ಗದರ್ಶನಲಿ ಚಿತ್ರಕಲೆನ ಸಿದ್ದಿಸಿಕಂಡ್ ಅದರ್ಲ್ಲೇ ಮಿಂಚಿದ ಶಿಷ್ಯರ ಬಗ್ಗೆ, ಅವರ ಸಾದನೆ ಬಗ್ಗೆ ಕೊಂಡಾಟದ ಮಾತ್‌ಗಳ ಹೇಳಿಕಂಡ್ ಬಂದ ಇವು ಹೃದಯವಂತರ್.

## ಇವರ ಕೈಲಿ ಪಳಗಿದ ಹೆಸ್‌ರ್ ಪಡ್ದ ಕಲಾವಿದರ್‌ಗ

ಕನ್ನಡ ನಾಡ್‌ಲಿ ಹೆಸ್‌ರ್ ಪಡ್ದ ಕಲಾವಿದರಾದ ಮೋನಪ್ಪ ಗೌಡ, ರಾಷ್ಟ್ರ ಪ್ರಶಸ್ತಿ ಪಡ್ದ ಕೆ.ಸಿ. ಗಣೇಶ ಆಚಾರ್, ಪುತ್ತೂರ್‌ನ ಎಂ.ಪಿ.

ದಿನೇಶ್ ಮತ್ತೆ ರಾಬರ್ಟ್ ರಾಷ್ಟ್ರೀಯ ಮಟ್ಟಲಿ ಚಿತ್ರ ಕಲೆನ ಪ್ರದರ್ಶನ ಮಾಡಿ ಹೆಸ್ರ್ ಪಡ್ದ ಆನಂದ ಬೆದ್ರಾಳ, ಹೊರ ದೇಶಲಿ ಮಿಂಚಿಕಂಡ್ ಇರುವ ರೊನಾಲ್ಡ್ ಪಿಂಟೋ, ಚಿತ್ರಕಲೆಲಿ ಬಾರೀ ಸಾದನೆ ಮಾಡ್ದ ಕೆ.ಎಸ್. ಪ್ರಸಾದ್, ಶಿವಪ್ರಸಾದ್, ಚೇತನಕುಮಾರ್, ಸುದಾಕರ ದರ್ಬೆ, ತಾರಾನಾಥ ಹಿಂಗೇ ತುಂಬಾ ಜನ ಪುರುಷೋತ್ತಮರ ಕೈಲಿ ಪಳ್‌ಗಿದವು. ಮೈಸೂರ್‌ನ ಕಾವಾ, ಮಂಗಳೂರ್‍ನ ಮಹಾಲಸ ಕಲಾ ಶಾಲೆಲಿ ಇವರ ಶಿಷ್ಯರ ಮೇಲೆ ಇವುಕೆ ತುಂಬಾ ಪ್ರೀತಿ ಅಬಿಮಾನ. ಹಂಗೆನೇ ದೇಶದ ಬೇರೆ ಬೇರೆ ಕಡೆಲಿ ಇರುವ ಸಾವಿರಾರ್ ವಿದ್ಯಾರ್ಥಿಗಳಿಗೆ ಸಾ ಇವರ ಮೇಲೆ ಅಷ್ಟೇ ಗೌರವ. ಬೇರೆ ಬೇರೆ ಕಾರಣಗಳ್‌ಂದ ಕೆಲವು ಮಕ್ಕ ಚಿತ್ರಕಲೆನ ಮುಂದುವರಿಸಿಕಾಗದೆ ಬೇರ ಬೇರೆ ಕೆಲಸಗಲ್ಲಿ ಒಳ್ಳ ಸ್ಥಾನಲಿ ಇದ್ದ್‌ಕಂಡ್ ಈ ಮಾಸ್ಟ್ರ್‌ಂದ ಪಡ್ದ ಪ್ರಯೋಜನನ ನೆಂಪು ಮಾಡ್ತಾ ಒಳೊ. ಕಲ್ಸಿದ ಮಕ್ಕಳ್‌ಂದ ಇಂತ ಮೆಚ್ಚುಗೆ ನಂಗೆ ಸಿಕ್ಕಿದ್ ದೊಡ್ಡ ಸಮ್ಮಾನ ಅಂತ ಎಂ.ಎಸ್. ಹೇಳ್ತಾ ಒಳೊ.

1974ರ್‌ಲಿ ಪುತ್ತೂರ್‌ನ ಸಂತ ಫಿಲೋಮಿನ ಹೈಸ್ಕೂಲ್‌ಲಿ ಚಿತ್ರಕಲಾ ಮಾಸ್ಟ್ರಾಗಿ ಸೇರ್ದ ಇವು ಅಂದ್ ಹೆಡ್ ಮಾಸ್ಟ್ರಾಗಿದ್ದ ಡೆನ್ನಿಸ್ ಡಿ'ಸೋಜ ಅವರ ಪ್ರೋತ್ಸಾಹ ಮಾರ್ಗದರ್ಶನನ ಯಾಗೋಳು ನೆನ್ಸಿಕಂಡಿದ್ದವೆ. ಚಿತ್ರಕಲೆನ ಕ್ಲಾಸ್‌ನ ಒಳಗೆ ಕಲ್ಸುವಷ್ಟೇ ಸ್ರದ್ದೆ, ತನ್ಮಯತೆಂದ ಕ್ಲಾಸ್‌ನ ಹೊರಗೆನೂ ಹೇಳಿಕೊಡುವ ಪುರುಷೋತ್ತಮರ ಶಿಷ್ಯರಲ್ಲಿ 12,000 ಕ್ಕೂ ಹೆಚ್ಚ್ ಮಂದಿ ಚಿತ್ರಕಲೆ ಪರೀಕ್ಷೆಲಿ ಪಾಸಾಗೊಳ, ಬೇರೆ ಬೇರೆ ರೀತಿಲಿ ಬಹುಮಾನ, ಸನ್ಮಾನ, ಪ್ರಶಸ್ತಿಗಳ ಪಡ್ದೊಳ.

**ಹವ್ಯಾಸಗ**

ಇವು ಒಬ್ಬ ಎನ್.ಸಿ.ಸಿ. ಅಧಿಕಾರಿ ಆಗಿದ್ದ್ 1998 ರ್ಲಿ ಮುಖ್ಯಮಂತ್ರಿ ಪದಕ ಪಡ್ದೊಳ. ಇವರ ಮಾರ್ಗದರ್ಶನಲಿ 12 ಮಕ್ಕ ರಾಷ್ಟ್ರ ಮಟ್ಟದ ವಿದ್ಯಾರ್ಥಿ ವೇತನ ಪಡ್ದೊಳ. ಇಬ್ಬರಿಗೆ ಅಂತಾರಾಷ್ಟ್ರೀಯ "ಡ್ಯೂಕ್ ಆಪ್ ಎಡಿನ್ ಬರ್ಗ್" ಪ್ರಶಸ್ತಿ ಸಿಕ್ಕಿದ್ ಇವರ ಹಿರಿಮೆಗೆ ಒಂದು ಸಾಕ್ಷಿ. ಪ್ರತೀ ವರ್ಷ ಎನ್.ಸಿ.ಸಿ.ಲಿ ಗಿಡ ನೆಡ್ಸುವ ಇವು ಭಾವೈಕ್ಯ ಶಿಬಿರ, ಪರ್ವತಾರೋಹಣ, ಸಾಹಸ ಕ್ರೀಡೆ, ಹೀಂಗೇ ಬೇರೆ ಬೇರೆ ವಿಷಯಲಿ ಬಾಗವಹಿಸೊಳ.

ಸಣ್ಣ ಮಕ್ಕ ಮಾಡ್ದ ಚಿತ್ರಗ ಮತ್ತು ಕಲಾಕೃತಿಗ, ಹೊರ ದೇಶದ ಅಂಚೆ ಚೀಟಿಗ, ನಾಡ್‌ನ ಸಾಹಿತಿ ಕಲಾವಿದರ ಭಾವಚಿತ್ರಗ ಮತ್ತೆ ಕೈಬರಹಗ, ಯುದ್ದ ವಿಮಾನದ (ಕರಕುಶಲ) ಮಾದರಿಗ ಹೀಂಗೇ ಬೇರೆ ಬೇರೆ ವಿಷಯಲಿ ಪುರುಷೋತ್ತಮರ್ ಸಂಗ್ರಹಣೆ ಮಾಡ್ಯೊಳ. ಅಷ್ಟೇ ಅಲ್ಲದೆ ಸಮ್ಮೇಳನ, ಉತ್ಸವಗಳಲಿ ಇದರ ಪ್ರದರ್ಶನ ಸಹ ಮಾಡಿ ಜನರ ಮೆಚ್ಚುಗೆ ಪಡ್ದೊಳ. ರಜಾ ದಿನಗಳ್‌ಲಿ ಕಮ್ಮಟ, ಕಾರ್ಯಾಗಾರ, ಶಿಬಿರಗಳ್‌ಲಿ ಸಂಪನ್ಮೂಲ ವ್ಯಕ್ತಿಯಾಗಿ ಬಾರೀ ಸಾದನೆ ಮಾಡ್ಯೊಳೊ. ಸುಳ್ಯದ ರಂಗಮನೆ, ಡಾ. ಕಾರಂತರ ಬಾಲವನಂದ ಹಿಡ್ದ್ ಬೆಳ್ತಂಗಡಿ, ಬಂಟ್ವಾಳ, ಸುಬ್ರಹ್ಮಣ್ಯ, ಕುಶಾಲನಗರ, ಪೆರಾಜೆ, ಎಣ್ಮೂರು, ಧರ್ಮಸ್ಥಳ ಗ್ರಾಮೀಣಾಬಿವೃದ್ದಿ ಯೋಜನೆಯ ಕೇಂದ್ರಗ, ರೋಟರಿ, ಲಯನ್ಸ್, ಜೇಸಿಸ್, ವೆಲೆರೋಡ್ ಸಂಸ್ಥೆಗಳ ಆಶ್ರಯಲಿ ತುಂಬಾ ಶಿಬಿರಗಳ ಮಾಡ್ಯೊಳ.

ಚಿತ್ರಕಲೆಗೆ ಸಂಬಂದಿಸಿದ ಹಂಗೆ ಕ್ಲೇ ವರ್ಕ್, ಪೇಪರ್ ಕ್ರಾಫ್ಟ್, ಬಬ್ಲ್ ಆರ್ಟ್, ಮುಖವಾಡ ರಚನೆ, ಹೂದಾನಿ ರಚನೆ, ಮಾರ್ಬಲ್ ಆರ್ಟ್ ಹೀಂಗೇ ಬೇರೆ ಬೇರೆ ವಿಷಯಲಿ ಮಕ್ಕಳಿಗೆ ಕಲ್‌ಸ್ತಾ ಇದ್ದೊ. ಶಾಲೆಲಿ ಮಕ್ಕಳೊಟ್ಟಿಗೆ, ಒಟ್ಟಿಗೆ ಇರುವ ಮಾಸ್ಟ್ರಗಳೊಟ್ಟಿಗೆ ಎನ್.ಸಿ.ಸಿ.ಶಿಬಿರಲಿ ಕೆಡೆಟ್‌ಗಳ ಒಟ್ಟಿಗೆ ಕೋಲಾಟ, ಜಾನಪದ ನೃತ್ಯ, ಪ್ರಹಸನಲಿ ಉತ್ಸಾಹಂದ ಬಾಗವಹಿಸಿ ಮಕ್ಕಳಿಗೆ ಮನರಂಜನೆ ಕೊಟ್ಟೊಳ.

ರೋಟರಿ ಸಂಸ್ಥೆನ ಸಹಾಯಲಿ ಜಪಾನ್ ದೇಶದ ಹತ್ತ್ ಮಕ್ಕಳ ಚಿತ್ರಗಳ ಪುತ್ತೂರಿಗೆ ತರ್ಸಿ ಇಲ್ಲಿನ ಹತ್ತ್ ಮಕ್ಕಳ ಚಿತ್ರಗಳ ಅಲ್ಲಿಗೆ ಕಳ್ಸಿ ಪ್ರೀತಿ ಬೆಳ್ಸುವ ಕೆಲ್ಸನ (ಸಾಂಸ್ಕೃತಿಕ ವಿನಿಮಯ) ಮಾಡ್ಯೊಳ. ದೆಹಲಿ ಮತ್ತೆ ಬೆಂಗಳೂರ್‌ನ ಕೇಂದ್ರೀಯ ಸಾಂಸ್ಕೃತಿಕ ತರಬೇತಿ ಕೇಂದ್ರಲಿ ತರಬೇತಿ ಪಡ್ದ ಇವು ಚಿತ್ರಕಲೆ ಕ್ಷೇತ್ರಲಿ ಜಿಲ್ಲೆಯ ಸಂಪನ್ಮೂಲ ಜನ ಆಗಿ ಗುರ್ತಿಸಿಕೊಂಡೊಳ. ಇವು 2003 ರ್‌ಲಿ ಜಿಲ್ಲಾ ಮಟ್ಟದ ಜನ ಮೆಚ್ಚಿದ ಶಿಕ್ಷಕ ಪ್ರಶಸ್ತಿ ಪಡ್ದೊಳ, 2006ರ್‌ಲಿ ಸುಳ್ಯದ ಗೌಡರ ಯುವ ಸೇವಾ ಸಂಘದವು ಗುರ್ತಿಸಿ ಗೌರವಿಸಿಯೊಳ. ಯಾಗೋಳು ಚಟುವಟಿಕೆಂದ ಇರುವ ಇವು ಸ್ನೇಹಜೀವಿ.

**ಶಿಬಿರಾರ್ಥಿಯಾಗಿ**

1986ರ್‌ಂದ 2011 ಮುಟ್ಟ 6ನೇ ಕರ್ನಾಟಕ ಏರ್ ಸ್ಕ್ವಾಡ್ರನ್ ಮಂಗಳೂರು ಇದರ ಕಡೆಂದ ಬೇರೆ ಬೇರೆ ಕಡೆಲಿ ನಡ್ದ ಸುಮಾರ್ 30 ಕ್ಯಾಂಪ್‌ಗಳ್‌ಲಿ ಮಕ್ಕಳೊಟ್ಟಿಗೆ ಭಾಗವಹಿಸಿಯೊಳ. ಮಂಗಳೂರು ಗ್ರೂಪ್ ಮಟ್ಟದ ಕಂಬೈಂಡ್ ವಾರ್ಷಿಕ ತರಬೇತಿ ಶಿಬಿರಲಿ (ಮಡಿಕೇರಿ, ಶಿವಮೊಗ್ಗ, ಉಡುಪಿ ಹೀಂಗೇ ಬೇರೆ ಬೇರೆ ಕಡೆ) ಚೆನ್ನೈ , ಮಹಾರಾಷ್ಟ್ರ, ಬೆಳಗಾಂ, ಉಡುಪಿ ಇಲ್ಲೆಲ್ಲ ನಡ್ದ ಬಾವೈಕ್ಯತಾ ಶಿಬಿರಲಿ ಭಾಗವಹಿಸಿಯೊಳ.

**ಸಾಹಸಲಿ**

ಅಸ್ಸಾಂನ ಗುವಾಟಿಲಿ ನಡ್ದ ದೇಶ ಮಟ್ಟದ ಬೆಟ್ಟ ಹತ್ತುವ (ಟ್ರಕ್ಕಿಂಗ್) ಶಿಬಿರಲಿ ದಿನಕ್ಕೆ 30 ಕಿ.ಮೀ., 12 ದಿನ ನಡಿಗೆಲಿ ಬಾಗವಹಿಸಿಯೊಳ. ಕೇರಳದ ನಯ್ಯಾರ್ ಡ್ಯಾಂಲಿ ಕಲ್ಲ್‌ನ ಹತ್ತುವ (ಶಿಲಾರೋಹಣ) ಹಂಗೆ ಬೊಳ್ಳಿಲಿ ಹಳ್ಳ ದಾಟುವ ಸಾಹಸಲಿ ಬಾಗಿಯಾಗೊಳ. ಮಡಿಕೇರಿಲಿ ನಡ್ದ ಆರ್ಮಿ ಬೆಟಾಲಿಯನ್ ಒಟ್ಟಿಗೆ ನಡ್ದ ಡೆಲ್ಲಿ ಗಣರಾಜ್ಯೋತ್ಸವ ಆಯ್ಕೆ ಶಿಬಿರಲಿ ಫಯರಿಂಗ್ ಹಂಗೇ ಮ್ಯಾಪ್ ಓದುವ (ರೀಡಿಂಗ್) ಅನುಭವ ಪಡ್ದೊಳ. ಉಡುಪಿನ ಕಟಪಾಡಿಲಿ ನಡ್ದ ನವ ಸೈನಿಕ್ ತರಬೇತಿ ಸಿಬಿರಲಿ ಬೋಟಿಂಗ್ ತರಬೇತಿ, ಮಂಗಳೂರುಲಿ ನಡ್ದ ಪ್ಯಾರಾ ಸೈಲಿಂಗ್ ಹಾರುವ ವಿಷಯಲಿ ಅನುಬವ ಪಡ್ದೊಳ.

**ಕೆಡೆಟ್‌ಗಳಿಗೆ ಪ್ರೇರಕ ಶಕ್ತಿ**

1984 ರ್‌ಂದ 2011ರ ವರೆಗೆ ವರ್ಷಕ್ಕೆ ನೂರರ ಹಂಗೆ ಸುಮಾರ್ 2800 ಕ್ಕೂ ಹೆಚ್ಚ್ ಕೆಡೆಟ್‌ಗಳಿಗೆ ತರಬೇತಿ ಕೊಟ್ಟೊಳ.ಎನ್.ಸಿ.ಸಿ. ಲಿ 'ಎ' ಪ್ರಮಾಣ ಪತ್ರದ ಪರೀಕ್ಷೆಲಿ ಕೆಡೆಟ್‌ಗಳ್‌ಂದ ಒಳ್ಳ ಸಾದನೆ– ನಾಲ್ಕ್ ಜನ ಕೆಡೆಟ್‌ಗ ಇಂದ್ ಸೇನೆಲಿ ಅದಿಕಾರಿ ಆಗಿ ಒಳೊ. ತುಂಬಾ ಕೆಡೆಟ್‌ಗ ಇಂಜಿನಿಯರ್ ಆಗಿ, ವೈದ್ಯರಾಗಿ, ಉದ್ಯಮಿಗಳಾಗಿ, ಮಾಸ್ಟ್ರಗಳಾಗಿ ದೇಶ ವಿದೇಶಲಿ ಸೇವೆ ಮಾಡ್ತಾ ಒಳ.ಇಬ್ಬರ್ ಕೆಡೆಟ್‌ಗ ದೆಹಲಿಲಿ ನಡ್ದ ಗಣರಾಜ್ಯೋತ್ಸವ ಪೆರೇಡ್ಲಿ ಬಾಗವಹಿಸಿಯೊಳ. ಹನ್ನೊಂದು ಜನ ರಾಷ್ಟ್ರಮಟ್ಟದ ಡಿ.ಜಿ.ಎನ್.ಸಿ.ಸಿ. ಹಂಗೆ ಸಹರಾ ಕಂಪನಿಯ ಸ್ಕಾಲರ್‌ಶಿಪ್ ಮತ್ತೆ ಇಬ್ಬರಿಗೆ ಅಂತಾರಾಷ್ಟ್ರೀಯ ಡ್ಯೂಕ್ ಆಪ್ ಎಡೆನ್ ಬರ್ಗ್ ಪ್ರಶಸ್ತಿಗ ಸಿಕ್ಕಿಟು.

**ಸಿಕ್ಕಿದ ಪ್ರಶಸ್ತಿಗ**

* 1989ರ್‌ಲಿ ರಾಜ್ಯದ ಒಳ್ಳ ಎನ್.ಸಿ.ಸಿ. ಅದಿಕಾರಿ ಆಗಿ ಮುಖ್ಯಮಂತ್ರಿಗಳ್‌ಂದ ಪ್ರಶಂಸನಾ ಪತ್ರ.

* 2003ರ್‌ಲಿ ಜನ ಮೆಚ್ಚಿದ ಶಿಕ್ಷಕ ಪ್ರಶಸ್ತಿ

* 2007ರ್‌ಲಿ ಪುತ್ತೂರು ತಾಲೂಕು ಸಾಹಿತ್ಯ ಸಮ್ಮೇಳನಲಿ ಸನ್ಮಾನ

* ಉಡುಪಿ ಉಪಾದ್ಯಾಯ ಸನ್ಮಾನದ ಗೌರವ ಪ್ರಶಸ್ತಿ

* ಪುತ್ತೂರು ಸುದ್ದಿಬಿಡುಗಡೆ ಪತ್ರಿಕೆಂದ ಸನ್ಮಾನ

* ಸುಳ್ಯದ ರೋಟರಿ ಕ್ಲಬ್ ಕಡೆಂದ ಸನ್ಮಾನ

* ರಾಜ್ಯ ಚಿತ್ರಕಲಾ ಸಂಘದ ವತಿಂದ ಮಾದರಿ ಚಿತ್ರಕಲಾ ಶಿಕ್ಷಕ ಪ್ರಶಸ್ತಿ

* ಸುಳ್ಯ ತಾಲೂಕು ಸಾಹಿತ್ಯ ಸಮ್ಮೇಳನಲಿ "ಕನ್ನಡ ಸಿರಿ' ಪ್ರಶಸ್ತಿ

* ಮೂಡಬಿದ್ರೆ ಕಾ. ವಾ. ಆಚಾರ್ಯ ಟ್ರಸ್ಟ್ ವತಿಂದ 'ಕಲಾನಿದಿ' ಸೃಜನಶೀಲ ಕಲಾ ಶಿಕ್ಷಕ ಪ್ರಶಸ್ತಿ

* 2009ರ್‌ಲಿ ದ.ಕ. ಜಿಲ್ಲೆಲಿ 'ಜಿಲ್ಲಾ ಮಟ್ಟದ ಉತ್ತಮ ಶಿಕ್ಷಕ' ಪ್ರಶಸ್ತಿ

* ಇಂಡಸ್ ಕಾಲೇಜ್ ಪುತ್ತೂರು ಇವರ ಲೆಕ್ಕಲಿ 'ಇಂಡಸ್ ಎಕ್ಸಲೆನ್ಸ್ ಎವಾರ್ಡ್'

* ಪುತ್ತೂರು ರೋಟರಿ ಕ್ಲಬ್ ವತಿಂದ ಸನ್ಮಾನ

* 2010 ಪುತ್ತೂರು ತಾಲೂಕು ಶಿಕ್ಷಕರ ಸಂಘದ ಸನ್ಮಾನ

* 2011ರ್‌ಲಿ ಸುಳ್ಯದ ವಸಂತ್ ವೇದ ಶಿಬಿರಲಿ ಸನ್ಮಾನ

* 2014ರ್‌ಲಿ ರಾಜ್ಯ ಉತ್ತಮ ಶಿಕ್ಷಕ ಪ್ರಶಸ್ತಿ

ಪೇಪರ್ ಕ್ರಾಪ್ಟ್, ಕ್ಲೇ ಮಾಡೆಲಿಂಗ್, ಕೊಲಾಜ್ ಚಿತ್ರ ಮಾಡ್ದು, ಮುಖವಾಡ ತಯಾರಿಸುದು, ಮಾರ್ಬಲ್ ಕಲೆ, ಪಿನ್ ಆರ್ಟ್, ಬಬ್ಲ್ ಆರ್ಟ್, ಹೀಂಗೇ ಕಲೆಲಿ ಎತ್ತಿದ ಕೈ. ಛಾಯಾ ಚಿತ್ರ, ಚಾರಣ, ಅಂಚೆ ಚೀಟಿ ಸಂಗ್ರಹ, ನಾಣ್ಯ ಸಂಗ್ರಹ ಇಂತಾ ಬೇರೆ ಬೇರೆ ಸಂಗತಿಲಿ ಸಮಯನ ಉಪಯೋಗಿಸಿಕಂಡವೆ. ಬೇಸಿಗೆ ಕಾಲಲಿ ಮಕ್ಕಳಿಗೆ ಶಿಬಿರ, ಕಮ್ಮಟಗಳಿಗೆ ಸಂಪನ್ಮೂಲ ವ್ಯಕ್ತಿಯಾಗಿ ತರಬೇತಿ ಕೊಟ್ಟೊಳ. ಚಿತ್ರಕಲೆಲಿ ಗುಣಮಟ್ಟದ (ಗ್ರೇಡ್) ಪರಿಕ್ಷೆಲಿ ನೂರಕ್ಕೆ ನೂರು ಪಲಿತಾಂಶ ದಾಖಲೆ ಆವುಟು. 12,000 ಕ್ಕಿಂತಲೂ ಹೆಚ್ಚ್ ಮಕ್ಕಳಿಗೆ ಚಿತ್ರಕಲೆಲಿ ತರಬೇತಿ ಕೊಟ್ಟೊಳ. 16ಕ್ಕೂ ಹೆಚ್ಚ್ ಮಕ್ಕ ಇವರ ಮಾರ್ಗದರ್ಶನಲಿ ಪಳಗಿ

ಇಂದ್ ದೊಡ್ಡ ಚಿತ್ರಕಲಾವಿದರಾಗಿ ಮಿಂಚಿಕಂಡ್ ಒಳೊ. ಡೆಲ್ಲಿನ ಕೇಂದ್ರ ಸಾಂಸ್ಕೃತಿಕ ತರಬೇತಿ ಕೇಂದ್ರಲಿ ತರಬೇತಿ ಪಡ್ದ್ ವಿದ್ಯಾರ್ಥಿಗಳಿಗೆ ಸ್ಲೈಡ್ ಶೋ ಮಾಡಿ ಕೊಟ್ಟೊಳ. ಬೆಂಗಳೂರ್ನ್ ಡಿ.ಎಸ್.ಆರ್.ಟಿ.ಸಿ.ಲಿ ಚಿತ್ರಕ್ಕೆ ಸಂಬಂದ ಪಟ್ಟ ಹಾಂಗೆ ತರಬೇತಿ ಪಡ್ದ್ ಚಿತ್ರಕಲಾ ಶಿಕ್ಷಕರಿಗೆ ಸಂಪನ್ಮೂಲ ವ್ಯಕ್ತಿಯಾಗಿ ಕೆಲ್ಸ ಮಾಡ್ಯೊಳ.

ಒಟ್ಟ್‌ಲಿ ಪುರುಷೋತ್ತಮ ಎಂ.ಎಸ್. ಚಿತ್ರ ಕಲಾವಿದನಾಗಿ ಮಾಡಿರುವ ಸೇವೆ ಮುಂದಿನ ತಲೆಮಾರಿಗೆ ಮಾದರಿ. ಇವರ ದರ್ಮಪತ್ನಿ ಶ್ರೀಮತಿ ಶ್ರೀಲತಾ BSNLಲಿ ಉದ್ಯೋಗಿಯಾಗಿದ್ದ್ ನಿವೃತ್ತಿಯಾಗೊಳ. ಮಗಳು ಗುಣಶ್ರೀ ಮಂಗಳೂರರ್‌ನ 'ಐರಿಸ್' ಪ್ಲೋರಿಸ್ಟ್‌ನ ಮ್ಹಾಲಕ ಶ್ರೀ ಉಮೇಶ್ ಅವರ ಮದುವೆ ಆಗಿ ಮಂಗಳೂರ್‌ಲಿ ಒಳೊ. ಮಂಜ ಕವೀಶ ಮತ್ತೆ ಸೊಸೆ ದೀಕ್ಷಾ ಬೆಂಗಳುರ್‌ಲಿ ಉದ್ಯೋಗಲಿ ಒಳೊ.

ತಂಗೆ ಗೀತಾ ಮೊಂಟಡ್ಕ ಮೈಸೂರ್‌ನ ರಂಗಾಯಣ ಕಲಾವಿದೆ. ಒಬ್ಬ ತಮ್ಮ ಜಯಪ್ರಕಾಶ ಎಂ.ಎಸ್. ನಾಟಕ ಕಲಾವಿದ.

---

**ಕು. ನೂತನಾ ಎಂ.ಜೆ.**
ಕೌಸ್ತುಭ ನಿಲಯ ಬಿಳಿನೆಲೆ ಗ್ರಾಮ
ನೆಟ್ಟಣ ಅಂಚೆ ಕಡಬ ತಾಲೂಕು ದ. ಕ. 574230
8296350465




# 'ಕೊಡಗು ಸಂಗಾತಿ' ಮೂಲಕ ಅರೆಬಾಸೆ ಬೆಳ್ಸಿದ ಮಾಂತ್ರಿಕ ಪಟ್ಟಡ ಪ್ರಭಾಕರ

● ಡಾ. ಪುರುಷೋತ್ತಮ ಕೆ.ವಿ. ಕರಂಗಲ್ಲು



ಅರೆಬಾಸೆ ಮತ್ತು ಅರೆಬಾಸೆ ಮಾತಾಡುವವರ ಅಚಾರ ವಿಚಾರಗಳ ಉಳ್ಸಿ ಬೆಳ್ಸಿಕೆ ಕರ್ನಾಟಕ ಸರಕಾರ ಡಿಸೆಂಬರ್ 15, 2011ರಲ್ಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಸ್ಥಾಪಿಸಿದ ಮೇಲೆ ಅರೆಬಾಸೆನ ಬೆಳವಣಿಗೆ ಒಟ್ಟಿಗೆ ಸಾಮಾಜಿಕ ಸ್ಥಾನಮಾನ ಸಾ ಹೆಚ್ಚಾತ್. ಅಕಾಡೆಮಿನ 10ನೇ ವರ್ಸಕ್ಕೆ ಕಾಲಿಟ್ಟ ಸಂದರ್ಬದ ನೆಂಪಿಗೆ ಮೊನ್ನೆ 2021, ಆಗಸ್ಟ್ 27ನೇ ತಾರೀಖಿಗೆ ಮಡಿಕೇರಿಲಿ 'ಅರೆಬಾಸೆ ದಶ ಸಂಬ್ರಮ' ಜಂಬರ ನಡ್ತ್. ಈ ಸಂದರ್ಬಲಿ ಶ್ರೀ ಪಟ್ಟಡ ಪ್ರಭಾಕರ ಇವು ಮಾರ್ಚ್ 1997ರ್ಲಿ ಸುರುಮಾಡ್ದ 'ಕೊಡಗು ಸಂಗಾತಿ' ತೇಳುವ ಪಾಕ್ಷಿಕ ಪತ್ರಿಕೆನ ಒಟ್ಟು 188 ಸಂಚಿಕೆಗಳ, ಅರೆಬಾಸೆ ಅಕಾಡೆಮಿ ಪುಸ್ತಕ ಬಂಡಾರಕ್ಕೆ ಕೊಡುಗೆ ಆಗಿ ಕೊಟ್ಟೊಳೊ. ಈ ಮೂಲಕ ಅರೆಬಾಸೆ ಸಾಹಿತ್ಯ ನಡ್ದ್ ಬಂದದಾರಿನ ತಿಳ್ಕಂಬಕ್ಕೆ ಆಸಕ್ತಿ ಇರೊವ್ಕೆ ಒಂದು ಒಳ್ಳ ಆದಾರ ಸಿಕ್ಕಿದಂಗೆ ಆತ್, ಜೊತೆಗೆ ಅಕಾಡೆಮಿ ಮೂಲಕ ಪಟ್ಟಡವು ಪಟ್ಟ ಸ್ರಮಕ್ಕೆ ಮನ್ನಣೆ ಸಿಕ್ಕಿದಂಗೂ ಆತ್.

'ಕೊಡಗು ಸಂಗಾತಿ' ಪತ್ರಿಕೆನ ಸುರೂನ ಸಂಚಿಕೆ 1997 ಎಪ್ರಿಲ್ 9ರಂದ್ ಮೈಸೂರ್‌ಲಿ ಶ್ರೀಮತಿ ಪಟ್ಟಡ ಶೀಲಾಮಣಿ ಇವರ ಸಂಪಾದಕತ್ವಲಿ ಬಿಡುಗಡೆ ಆತ್. ಇದರ ಹುಟ್ಟಿಗೆ ಮೂಲ ಕಾರಣಕರ್ತ ಪಟ್ಟಡ ಎಂ.ಪ್ರಭಾಕರ. ಅರೆಬಾಸೆ ಸಾಹಿತ್ಯಕ್ಕೆ ಪ್ರತ್ಯೇಕ ವಿಭಾಗನ ಕೊಟ್ಟ್, ಅರೆಬಾಸೆ ಸಾಹಿತ್ಯನ ಒಂದು ಪತ್ರಿಕೆನ ರೂಪಲಿ ಬೆಳ್ಸಿಕೆ ಅಡಿಪಾಯ ಹಾಕಿ

ಕೊಡುದರ ಮೂಲಕ ಪಟ್ಟಡ ಪ್ರಭಾಕರವು ಅರೆಬಾಸೆ ಸಂಸ್ಕೃತಿ ಮತ್ತು ಸಾಹಿತ್ಯಕ್ಕೆ ಬಾರೀ ದೊಡ್ಡ ಕಾಣಿಕೆ ಕೊಟ್ಟೊಳೊ. ಕೊಡಗು ಸಂಗಾತಿ ಪತ್ರಿಕೆನ ಸುರೂನ ಸಂಚಿಕೆ ಮಾರ್ಚ 31ರಂದ ಎಪ್ರಿಲ್ 14, 1997ರ ವರೆಗೆ ಅಂದರೆ ಪಾಕ್ಷಿಕ ಪತ್ರಿಕೆ ಆಗಿ ಹೊರಬಾತ್.

'ಕೊಡಗು ಸಂಗಾತಿ' ಪತ್ರಿಕೆ ಹುಟ್ಟಿಗೆ ಕಾರಣಕರ್ತರಾದ ಕೊಡಗು ಜಿಲ್ಲೆಯ ಮಡಿಕೇರಿ ಹತ್ರ ಇರ್ವ ಆವಂದೂರಿನ ಶ್ರೀ ಪಟ್ಟಡ ಪ್ರಭಾಕರ ಇವು 1968ರ್ಲಿ ಭಾರತೀಯ ವಾಯುಸೇನೆಗೆ ಸೇರ್‍ದೊ. 1983ರ್ಲಿ ನಿವೃತ್ತಿ ಪಡ್ಕಂಡ್ ಆಮೇಲೆ 1985ರ್ಲಿ ಸ್ಟೇಟ್ ಬ್ಯಾಂಕ್‌ಲಿ ಉದ್ಯೋಗಿಯಾಗಿ ನೇಮಕ ಆದೊ. ಸಂಘಟನೆ ಮತ್ತು ಸಾಹಸ ಅವರ ರಕ್ತ್‌ಲಿ ಸೇರಿ ಹೋವುಟು. 1989ರ್ಲಿ ಮಂಡ್ಯ ಜಿಲ್ಲೆಲಿ ನಿವೃತ್ತ ಯೋಧರ ಸಂಘಟಿಸಿ, ತೂಬಿನ ಕೆರೆ ಹಕ್ಕಲೆ ಸೈನಿಕ ನಗರ ಸ್ಥಾಪನೆಗೆ ಕಾರಣಕರ್ತರಾದೊ. ಸಾಹಿತ್ಯ ಕ್ಷೇತ್ರಲಿ ಸಹ ಆಸಕ್ತಿ ಇದ್ದ ಇವು ಸುರೂಗೆ 'ನನ್ನ ಕನಸಿನ ಮಡಿಕೇರಿ' ತೇಳುವ ಪುಸ್ತಕನ 1994ರ್ಲಿ ಬರ್ದ್ ಕನ್ನಡ ಸಾಹಿತ್ಯ ಲೋಕಕ್ಕೆ ಕಾಲಿಟ್ಟೊ. ಸರಳ ಸ್ನೇಹಜೀವಿ ಪಟ್ಟಡ ಎಂ ಪ್ರಭಾಕರ ಇವು ಮುಂದಾಲೋಚನೆ ಇರುವ ಒಬ್ಬ ಕನಸುಗಾರ ಮತ್ತು ಶ್ರಮಜೀವಿ. 1983ರಂದ 2000ನೇ ಇಸವಿವರೆಗೆ 17 ವರ್ಸಗಳ ಕಾಲ ಕೊಡಗು ಗೌಡ ವಿದ್ಯಾಸಂಘದ ನಿರ್ದೇಶಕ ಆಗಿ ಸೇವೆ ಸಲ್ಲಿಸಿ ಜನ ನೆಂಪುಲಿ ಇಸಿಕಂಬ ತುಂಬಾ ಜನಪಯೋಗಿ ಕೆಲ್ಸಗಳ ಮಾಡಿ, ಹೆಸ್‌ರ್ ಪಡ್ದಳೊ.

ಅವರ ಸಮಾಜಮುಖಿ ಕಾರ್ಯಗಳ ಬುಟ್ಟು ಸಾಹಿತ್ಯಲೋಕಕ್ಕೆ ಮತ್ತು ಗೌಡ್ರ ಸಂಸ್ಕೃತಿಗೆ ಸಂಬಂಧಪಟ್ಟಂಗೆ ಅವು ಮಾಡ್ದ ಸೇವೆ ಸದಾ ನಮ್ಮ ಕಣ್ಣೆದುರಿಗೆ ಬಂದ್ ನಿಂತದೆ. ಗೌಡ ಸಂಸ್ಕೃತಿಗೆ ನಮ್ಮ ಕುಲಗುರು ವೆಂಕಟ್ರಮಣ ದೇವ್ರು, ಒಡಿಕತ್ತಿ (ಜಮ್ಮ) ಮತ್ತು ಕೋವಿ (ಉಂಬಳಿ) ಈ ಮೂರು ವಿಷಯಗಳ ಒಟ್ಟ್ ಸೇರ್ಸಿ ಚಿಹ್ನೆನ ರಚನೆ ಮಾಡ್ದ ಗೌರವ ಇವುಕೆ ಸಂದದೆ. ಸುರೂನ ಸಂಚಿಕೆಲಿ ವೆಂಕಟ್ರಮಣ ದೇವ್ರು, ಒಡಿಕ್ತ್ತಿ ಮತ್ತೆ ಕೋವಿ ಇರುವ ಚಿಹ್ನೆನ ಉಪಯೋಗಿಸಿದೊ. ಅರೆಬಾಸೆಗೆ ಒಂದು ಪತ್ರಿಕೆಲಿ ಜಾಗ ಮಾಡಿಕೊಡುವ ಮೂಲಕ ಅರೆಬಾಸೆಗೆ ಸಾಮಾಜಿಕ ಗೌರವ ಸಿಗುವಂಗೆ ಮಾಡ್ದೊ. ಇದರ ಕನ್ನಡ ವಿಭಾಗಲೀ ಸಹ ಅರೆಬಾಸೆ ಮಾತಾಡುವ ಗೌಡ್ರ ಸಂಸ್ಕೃತಿ, ಇತಿಹಾಸಕ್ಕೆ ಸಂಬಂಧಪಟ್ಟ ಲೇಖನಗ ಪ್ರತಿ ಸಂಚಿಕೆಲೂ ಬಂದುಟು. ಅರೆಬಾಸೆಲಿ ಧಾರವಾಹಿ ಸಾ ಈ ಪತ್ರಿಕೆ

ಮೂಲಕ ಬಂದುಟು ತೇಳಿಕೆ ಹೆಮ್ಮೆ ಆದೆ. ಆಶ್ವಥಿ ಅರವಿಂದ್ ಅವರ ಕನ್ನಡಲಿ ಬಂದ ಕರಿಚಿನ್ನತೇಳುವ ಮೂಲ ದಾರವಾಹಿನ ಅರೆಭಾಷೆಗೆ ಎಂ.ಇ. ಮಹಮ್ಮದ್ ಇವು ಅನುವಾದ ಮಾಡಿ ಬರ್ದ್ದಳೊ. ಒಟ್ಟು 33 ಕಂತ್ ಗಳ್ಲಿ ಧಾರವಾಹಿನ ಪ್ರಕಟ ಮಾಡ್ಯಳೊ. ಶಂಕರನ ಮುತ್ತಪ್ಪ ಬಸಪ್ಪ ಇವು ಬರ್ದ ಇನ್ನೊಂದು ಧಾರವಾಹಿ 'ವಾಂಟೆಡ್ ಮಿಸ್ಟರ್‌ರಾಜು (ನಮ್ಮ ರಾಜು ಮಂಜನ ಕಥೆ)' 38 ಕಂತ್‌ಗಳ್ಲಿ ಪ್ರಕಟ ಆವುಟು. ಅರೆ ಬಾಸೆ ಸಾಹಿತ್ಯದ ಎಲ್ಲಾ ಪ್ರಕಾರಗ ಈ ಪತ್ರಿಕೆಲಿ ಜಾಗ ಪಡ್ಕೊಂಡೊಳೊ. ಒಡ್ಸುವಕತೆ, ಹಾಸ್ಯ, ಪಳ್ಮೆ, ಕತೆ, ಪೊದ್ಯ, ವ್ಯಕ್ತಿ ಪರಿಚಯ, ಹಿಂಗೆ ಎಲ್ಲಾ ರೀತಿನ ಸಾಹಿತ್ಯ ಇದರ್ಲಿ ಉಟ್ಟು. ಮಕ್ಕ, ಗೂಡೆಗ, ಹೈದಂಗ ಸೇರಿ ಎಲ್ಲಾ ಪ್ರಾಯದ, ಎಲ್ಲಾ ಜಾತಿ ಧರ್ಮದವುಕೆ ಈ ಪತ್ರಿಕೆ ಜಾಗ ಕೊಟ್ಟುಟು.

ಚಂದಾದಾರರ ಕೊರತೆ ಮತ್ತು ಆಡಳಿತಾತ್ಮಕ ಕಾರಣಗಳಂದ ಕೆಲವು ಸರ್ತಿ ಈ ಪತ್ರಿಕೆನ ಮಾಸಿಕ ಪತ್ರಿಕೆ ಆಗಿ ನಡ್ಸಿದೋ. ಒಟ್ಟು 188 ಸಂಚಿಕೆಗಳ ಹೊರತಂದ್, ಕಡೇಗೆ 2005 ಅಗಸ್ಟ್‌ವರೆಗೆ ಅಂದರೆ 8 ವರ್ಷ 4 ತಿಂಗಳ ಕಾಲ ಈ ಪತ್ರಿಕೆ ಪ್ರಸಾರಲಿ ಇತ್. ಎಷ್ಟೋ ಜನ ಬರಹಗಾರರ ತಯಾರ್ ಮಾಡ್ದ್ ಮತ್ತು ಅರೆಬಾಸೆಗೆ ಸಮಾಜಲಿ ಗೌರವ ಬರುವಂಗೆ ಮಾಡ್ದ 'ಕೊಡಗು ಸಂಗಾತಿ' ಪತ್ರಿಕೆ ಇಂದ್ ಚರಿತ್ರೆ ಪುಟಕ್ಕೆ ಸೇರಿ ಹೋದರೂ ಅದರ ಸಾಧನೆಗ ಸಾಹಿತಿಗಳ ರೂಪಲಿ ಮತ್ತು ಬರಹಗಳ ರೂಪಲಿ ಜೀವಂತ ಆಗಿ ಉಟ್ಟು.ಅದ್ಕೆ ಬೆವ್ರು ಸುರ್ಸಿದ ಶ್ರೀ ಪಟ್ಟಡ ಪ್ರಭಾಕರವು ಪತ್ರಿಕಾರಂಗಲಿಯೂ ಒಬ್ಬ ಸೇನಾನಿತರ ಹೋರಾಟ ಮಾಡೆಳೊ. ಹಂಗಾಗಿ ಇವು ಅರೆಬಾಸೆ ಸಾಹಿತ್ಯ ಲೋಕಲಿ ಸಾಸ್ವತ ಆಗಿ ಉಳ್ದವೆ.

---

**ಡಾ. ಪುರುಷೋತ್ತಮ ಕೆ.ವಿ. ಕರಂಗಲ್ಲು**
'ಚಾಣಕ್ಯ'
ಸರಕಾರಿ ಪ್ರಥಮ ದರ್ಜೆ ಕಾಲೇಜು ಮುಂಭಾಗ,
ಗಾಂಧೀನಗರ, ಕಾವೂರು, ಮಂಗಳೂರು, ದ.ಕ. – 575015
ಮೊಬೈಲ್ : 9448216070
jeevan.pv3@gmail.com




# ಮನೆ ಮನಗಳ ಕಲಾಕುಂಚ

● ಕುಯಿಂತೋಡು ದಾಮೋದರ

ನಮ್ಮಲ್ಲಿಗೆ ಬರುವ ಚಿತ್ರ ಕಲಾವಿದ ಯಾರ್? ಯಾವ ಊರ್‍ನವ ಆಗಿರ್‍ದು? ಕಲಾವಿದ ತೇಳಿರೆ ಅವರದೇ ಆದ ಮರ್ಜಿಗ ಸಾಮಾನ್ಯವಾಗಿ ಇದ್ದದೆ. ಅವರ ನಡೆ ನುಡಿ, ಮಾತ್ ಕತೆ, ಉಡಿಗೆ ತೊಡಿಗೆ, ಹೇರ್ ಸ್ಟೈಲ್, ಗಡ್ಡ ಮೀಸೆ ಇಂತದೆಲ್ಲ. ಮತ್ತೆ ಅವಂಗೆ ನಾವ್, ನಾವ್ಗೆ ಅಂವ ಸಮ್ಮತ ಆದೊ? ಇಂತ ಯೋಚ್ನೆ ಮನ್ಸಿಲಿ ಹಾದ್ ಹೋಕೆ ಸುರಾಗಿತ್ತ್. ಇದ್ಕೆ ಕಾರಣಂತೇಳಿರೆ ನಮ್ಮ 'ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ' ಅಧ್ಯಕ್ಷ ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆಯವು ಒಂದು ದಿನ ದೂರವಾಣಿ ಕರೆಮಾಡಿ "ನಮ್ಮ ಅಕಾಡೆಮಿಂದ ಈ ಸರ್ತಿ ಒಂದು ಕಾರ್ಯಕ್ರಮ ಹಾಕೊಂಡೊಳೊ. ಅದ್ ಏನ್‌ಂತೇಳಿರೆ ಒಂದು ಹತ್ತ್ ಹನ್ನೆರಡ್ ಚಿತ್ರ ಕಲಾವಿದರ ಬೇರೆ ಬೇರೆ ಊರುಂದ ಬಾಕೆ ಮಾಡಿ, ನಮ್ಮ ಕೊಡಗಿನ ಬೇರೆ ಬೇರೆ ಮನೆಗಲ್ಲಿ ಉಳ್ಕಂಬ ವ್ಯವಸ್ತೆ ಮಾಡ್ದು. ಅವು ಅಲ್ಲಿ ನಮ್ಮ ಸಂಸ್ಕೃತಿಗೆ ಒಪ್ಪುವ ಚಿತ್ರಗಳ ಬರಿದು. ಕಡೆಗೆ ಒಂದಿನ ಆ ಚಿತ್ರಗಳ ಮಡಿಕೇರಿಲಿ



ಪ್ರದರ್ಶಿಸಿ ಮತ್ತೆ ಅಕಾಡೆಮಿನ ಆಸ್ತಿಯಾಗಿ ಇಸಿಕಂಬೊದು. ಹಾಂಗೆ ನಿಮ್ಮಲ್ಲಿ ಒಬ್ಬ ಕಲಾವಿದನ ಒಂದು ವಾರ ಉಳ್ಸಿಕಂಬಕೆ ಆದೊ?" ಅಂತ ಕೇಳ್ದೊ. ಇದೊಂದು ಸಾಂಸ್ಕೃತಿಕ ವಿನಿಮಯದ ಕಾರ್ಯಕ್ರಮ ಆದರ್‌ಂದ ಹೆಚ್ಚಿಗೆ ಯೋಚನೆ ಮಾಡದೆ ಮನೆಯವರ ಕೇಳಿಕಂಡ್ ಒಪ್ಪಿಗೆ ಕೊಟ್ಟೆ. ಹೇಂಗೂ ನಮ್ಮ ಸೊಸೆ ಶ್ರೀಮತಿ ಸ್ಮಿತಾ ಅಮೃತರಾಜ್ ಅಕಾಡೆಮಿನ ಸದಸ್ಯೆಯೂ ಆಗಿತ್ತಲ್ಲ. ಹಾಂಗಾಗಿ ಕಲಾವಿದ ಬರುವ ದಿನಕ್ಕಾಗಿ ಕಾಯ್ತಾ ಇದ್ದೊ.

ಅದೇ ಹೊತ್ತ್‌ಲಿ ನಾ ಹಿಂದೆ ನೋಡ್ದ ಕೆಲವು ಜಾನಪದ ಸಾಂಸ್ಕೃತಿಕ ಪಳೆಯುಳಿಕೆಗಳ ಸಂಗ್ರಹಗಳ ಚಿತ್ರ ಮನ್ಸ್‌ಲಿ ಹಾದ್ ಹೋತ್ತ್. ಅವುಗಳ್ಲಿ ಮುಖ್ಯಪಟ್ಟಂದ್‌ಂತೇಳಿರೆ ಭೂತಾನ್ ದೇಶದ ತಿಂಪು ಎಂಬಲ್ಲಿದ್ದ ಅವರ 'Folk Heritage Village' ಎಂಬ ವಸ್ತು ಸಂಗ್ರಹಾಲಯ. ಅದ್ ಅಲ್ಲಿನ ಈಗಿನ ರಾಣಿಯ ಆಸಕ್ತಿಂದ ಆದ್. ತಿಂಪು ನಗರದ ಹೊರಗೆ ಹಳ್ಳಿ ತರದ ಪರಿಸರಲಿ ಬೇರೆ ಬೇರೆ ಕಟ್ಟಡಗಳಲಿ ಅಲ್ಲಿನ ಪ್ರಾಚೀನ ಜನರ್ ಬಳ್ಸ್‌ತಿದ್ದ ತರತರದ ವಸ್ತುಗಳ ಒಪ್ಪಾಗಿ ಜೋಡ್ಸಿ ಇಸಿಯೊಳೊ. ಇದರ ನಾವ್ ನೋಡ್ದ್ 2015ರ ಸೆಪ್ಟೆಂಬರ ತಿಂಗಳ್ಲಿ ಅಲ್ಲಿಗೆ ಹೋಗಿರಿಕನ. ಹಾಂಗೆನೆ 2011ರ ನವೆಂಬರ್ ತಿಂಗಳ್ಲಿ ನಮ್ಮ ಈಶಾನ್ಯ ರಾಜ್ಯಗಳಿಗೆ ಹೋಗಿರಿಕನ 'ಮೇಘಾಲಯ ರಾಜ್ಯ'ಕ್ಕೂ ಹೋಗಿದ್ದೊ. ಶಿಲಾಂಗ್ ಅಲ್ಲಿನ ರಾಜಧಾನಿ. ಅಲ್ಲಿ ಏಳ್ ಉಪ್ಪರಿಗೆಗಳ ದೊಡ್ಡ ಕಟ್ಟಡಲಿ 'Don Bosco Museum' ಅಂತ ಕರೆವ ದೊಡ್ಡ ವಸ್ತು ಸಂಗ್ರಹಾಲಯ ಉಟ್ಟು. ಅಸ್ಸಾಮಿನ ರಾಜ್ಯಗ ಅಂದರೆ ನೂರಾರ್ ಬುಡಕಟ್ಟ್ ಜನಾಂಗಗಳ ನಾಡ್. ಆ ಜನಾಂಗಗಳ ಜನ ಜೀವನಕ್ರಮಗಳ ತಿಳಿಯೊಕುಂತಾದರೆ ಈ ಮ್ಯೂಸಿಯಂಗೆ ಹೋದರೆ ಸಾಕ್. ಮೇಘಾಲಯಕ್ಕೆ ಹೋದೊವು ಇದರ ನೋಡದೆ ಬಂದರೆ ಅದ್ ಅವರ ಪಾಲಿಗೆ ದೊಡ್ಡ ನಷ್ಟನೇ ಸರಿ. ಇದ್ ರಾಷ್ಟ್ರೀಯ ಮಾತ್ರ ಅಲ್ಲ ಅಂತರಾಷ್ಟ್ರೀಯ ಮಟ್ಟಲಿ ಹೆಸ್ರ್ ಪಡ್ದದ್. ಬೇರೆ ಬೇರೆ ಜನಾಂಗಗಳ ಉಡಿಗೆ ತೊಡಿಗೆ, ಅವರ ಹಾಡ್ ಕುಣಿತ, ವೃತ್ತಿಜೀವನ, ಅವರ ಸಂಗೀತ ಸಾದನ, ಮೀನ್‌ಗಾರಿಕೆಲಿ ಬಳ್ಸುವ ವಸ್ತುಗಳ ಸಹಿತ ಎಲ್ಲಾ ಚಿತ್ರಗಳ ನೋಡ್ದೊವು, ಯಂತಾ ಚಿತ್ರಂತಲೇ ಹೇಳ್ದೊ ಹೊರ್‌ತ್ ಮಾದರಿಗಳ ಚಿತ್ರಂತ ಯಾರೂ ನಂಬಿತ್ಲೆ. ಅಷ್ಟ್ ನಾಜೂಕಾಗಿ ಉಟ್ಟು. ಇಂತ ಯತ್ನ ನಮ್ಮ ದೇಶದ ಇತರ ಕಡೆಗಳಲಿ ಸಹ ಆಗುಟ್ಟು. ನಮ್ಮ ರಾಜ್ಯಲೂ ಉಟ್ಟು.

ಇದೇ ರೀತಿಲಿ ನಮ್ಮ ಅರೆಬಾಷಿಕ ಗೌಡರ್ ನಡ್ದ್ ಬಂದ ಜನ ಜೀವನದ ಮಾದರಿಗಳ ತಯಾರಿಸಿ ಜನಪದ ಗ್ರಾಮಲಿ ಇಸಿರೆ ಅದ್ ಒಂದು ಒಳ್ಳೆ ಪ್ರಯತ್ನ ಆದು. ಆದರೆ ಇದಕ್ಕೆ ತುಂಬಾ ದುಡ್ಡು ಬೇಕಾದು. ದುಡ್ಡು ಇದ್ದರೂ ಸಾಲದ್

ಸುಳ್ಯದ ಸೋಣಂಗೇರಿಯ ಮೋಹನ್ ಸೋನರಂತ ಅಪ್ರೂಪದ ಕಲಾವಿದರೂ ಬೇಕು. ಹಾಂಗೆನೆ ಪಂಜಾಬಿನ ಚಂಡೀಘಡದಲ್ಲಿರುವ ರಾಕ್ ಗಾರ್ಡನ್(Rock Garden)ಲಿ ಕಲ್ಲ್ ಬಂಡೆ, ಬಿಸಾಡಿದ ಪಿಂಗಾಣಿ, ಕನ್ನಡಿ ಚೂರುನಂತ ಬೇಡದ ವಸ್ತುಗಳಂದಲೇ ಅರ್ಥಿದ ಮನ ಸೆಳೆವ, ನಂಬಿಕೆ ಬಾರದ ಕಲಾ ರಚನೆಗಳ ರಚಿಸಿದ ಕಲಾವಿದರ್, ಅದಕ್ಕೆ ಕಾರಣರಾದಂತ ನೇಕ್ ಚಂದ್ (Nek Chand)ರಂತ ಕಲಾಬಿಮಾನಿ ಸಹ ಬೇಕಾದು. ಆದರೆ ಇದೆಲ್ಲ ಎಪ್ಪತ್ತೈದ್, ನೂರ್ ವರ್ಷಗಳ ಹಿಂದೆನೇ ಅಕಾಗಿತ್ತ್ ಅಂತ ಅನ್ಸಿದೆ. ಏಕೆಂತೇಳಿರೆ ಇಂದ್ ಹಳೆಕಾಲಲಿ ಬಳ್ಸ್‌ತಿದ್ದ ವಸ್ತುಗ ಕಾಣೆಯಾಗುಟು, ಜೀವನಕ್ರಮ ಬದಲಾಗುಟು. ಯಾಗ ಬತ್ತ ಬೆಳ್ಸುವ ಗದ್ದೆ ಎಲ್ಲಾ ಅಡಿಕೆ ತೋಟ ಆತೋ ಆಗಲೇ ಜೀವನಕ್ರಮನೂ ಬದಲಾಗುಟು. ಹಳೆ ಕಾಲಲಿ ಅಚರಿಸ್‌ತಿದ್ದ ಹಬ್ಬ ಹುಣ್ಣಿಮೆ ಜೀನವಕ್ರಮ ಇಂದ್ ಕಾಲಕೆ ಸಂದ್ ಹೋಗುಟು.

ಇಂತಹ ಯೋಚನೆಗಳ್ಲಿ ಮುಳ್ಗಿರಿಕಾಕನ ಒಂದು ದಿನ ಹಿಂಬೊತ್ತಿಗೆ ಅಧ್ಯಕ್ಷರೇ ಕಲಾವಿದನ ಕರ್ಕಂಡ್ ನಮ್ಮಲ್ಲಿಗೆ ಬಂದೊ. ನಾವ್ ಅವಂಗೆ ಊಟೋಪಚಾರ ಎಲ್ಲ ಮನೇಲಿ ಆದರೂ ಒಳ್ಕಂಬಕೆ ಮನೆಂದ ಹಂಞ ದೂರದಲಿರುವ ಕಟ್ಟಡಲಿ ವ್ಯವಸ್ತೆ ಮಾಡಿದ್ದೊ. ಏಕೆಂತೇಳಿರೆ ಕಲಾವಿದನ ಕಲಾ ಕಸುಬಿಗೆ, ಏಕತಾನಕ್ಕೆ ನಮ್ಮಿಂದ ತೊಂದರೆ ಆಕಾಗದಲ್ಲಂತ. ಮನೇಲಾದ್ರೆ ಮಕ್ಕ ಮರಿಗಳ ಆಟ, ನಾವ್ ಮಾತಾಡ್ದು, ಇನ್ನ್ ಮನೆಗೆ ಬರುವ ನೆಂಟ್ರ್ ಇಷ್ಟರ್, ಇವೆಲ್ಲಾ ಅಂವನ ಏಕಾಂತಕ್ಕೆ, ಕಲಾರಚನೆಗೆ ಅಡ್ಡಿ ಆಕಾಗದ್ ಮತ್ತೆ ಅಂವ ಹೇಂಗೂ ಹೊರಗಿನವ, ಪರಿಚಯ ಇಲ್ಲೆ, ಅಂವನ ಸೊಬಾವ ಏನ್‌ಂತ ನಾವ್ಗೆ ಗೊತ್ತ್ಲೆ. ಅದೂ ಕೊರೋನಾದ ಈ ಕಾಲಲಿ ಏಕಾಏಕಿ ಮನೆ ಒಳಗೆ ಒಬ್ಬ ಅಪರಿಚಿತನ ಉಳ್ಸಿಕಂಬುದುಂತೇಳಿರೆ ಹೇಂಗೆಂತೇಳಿ ಹೊರಗೆ ವ್ಯವಸ್ತೆ ಮಾಡ್ದ್.

ನಾವ್ ಅಂವನ ಅಲ್ಲಿಗೆ ಕರ್ಕಂಡೋಗಿ ತೋರ್ಸಿಕಾಕನ "ಜಾಗ ಎಲ್ಲ ಲಾಯ್ಕುಟ್ಟು, ಆದ್ರೆ ನಾನ್ ಮೈಸೂರ್ಲಿ ಜನಗಳ ನಡೂಲಿ ವಾಸ ಮಾಡಿಕೊಂಡಿರುಂವ, ಇಲ್ಲಿ ಒಬ್ಬನೇ ಹೇಂಗಿರ್ದೂಂತ" ಹೇಳೊಕೆ. ಇನ್ನೇನ್ ಮಾಡ್ದು? ಜನ ನೋಡಿಕನ ಪರವಾಗಿಲ್ಲೆಂತ ಕಂಡತ್ "ಆತಂದ್ರೆ ಮನೇಲೆ ಇರಿ"ಂತ ಒಪ್ಪಿದೊ. ಮನೆ ಉಪ್ಪರಿಗೆಲಿ ಒಂದು ಕೋಣೆನ ಸರಿಪಡ್ಸಿ ಕೊಟ್ಟೊ.

ಆ ದಿನ ರಾತ್ರಿ ಮಲ್ಗಿಕೆ ಮುಂದೆ ಅಂವನ ಕುಟುಂಬದ ಹಿನ್ನೆಲೆ, ವೃತ್ತಿಜೀವನ, ಕಲಾಸಕ್ತಿ, ಸಾಧನೆಗಳ ಬಗ್ಗೆ ಪರಸ್ಪರ ಮಾತಾಡಿ ತಿಳ್ಕೊಂಡೊ.

ಕಲಾವಿದನ ಹೆಸ್ರ್ ಗಂಗಾಧರ ಮೂರ್ತಿಂತ. ಊರು ಮೈಸೂರು. ಅಂವನ ಹೆಣ್ಣ್ ಸರಕಾರಿ ಉದ್ಯೋಗಿ. ಒಬ್ಬನೇ ಮಂಜ ಚಿತ್ರಕಲೆನೇ ವೃತ್ತಿಯಾಗಿ

ಸ್ವೀಕರಿಸಿಕಂಡವ. ಮಾತ್‌ಕತೆ, ನಡೆ ನುಡಿ ಎಲ್ಲ ಹಿತ ಮಿತ. ತಲೆ ಕೂದಲ್ ಹಂಞ ಉದ್ದ ಇರುದು ಬುಟ್ಟರೆ ಮತ್ತೇನೂ ಹೆಚ್ಚ್ ಕಡಿಮೆ ಇತ್ಲೆ. ಒಂದೆರಡ್ ದಿನಗಳ್ಲಿ ನಮ್ಮೊಟ್ಟಿಗೆ ಅವನೂ ಒಬ್ಬ ಆತ್. ಅವಂದ ನಾವು ಕಲಾ ಜಗತ್ತಿನ ಸಂಗತಿಗಳ ಒಂದಿಷ್ಟ್ ತಿಳ್ಕೊಂಡೊ. ಮಾರ್ನೆ ದಿನ ಬೊಳ್ಪಿಗೆ ಎದ್ದ್ ಮನೆ ಎದ್‌ರ್‌ಗಡೆ ಜಗಲಿಲಿ ಚಿತ್ರ ರಚನೆಗೆ ತಯಾರಿ ಮಾಡ್ತ್. ನಮ್ಮ ಕಲಾವಿದಂಗೆ ಕೂಸುನ ಮೀಸುವ ಚಿತ್ರ ಬುಡ್ಸಿಕೆ ಹೇಳಿದ್ದೊ. ಮಾದರಿಗೆ ಒಂದು ಬಾವಚಿತ್ರನೂ ಕೊಟ್ಟಿದ್ದೊ. ಆ ಚಿತ್ರಲಿದ್ದ ಕೂಸು ಹಂಞ ದೊಡ್ಡದ್. ಮೀಸುವ ಹೆಂಗ್ಸ್ ನಡು ಪ್ರಾಯದ್ದ್. ಕೂಸು ತುಸು ಸಣ್ಣದಿದ್ದ್ ಹೆಂಗ್ಸ್ ಇನ್ನೂ ಅಜ್ಜಿಯಾಗಿದ್ದರೆ ಒಳ್ಳೆದಲ್ಲೊ? ಅಂತ ನಾವ್ಗೆಲ್ಲ ಅನ್ಸಿತ್. ಕಲಾವಿದನೂ ಹೌದುಂತ ಹೇಳ್ತ್. ಆದರೆ ಈಗ ಕೂಸುನ ಮತ್ತು ಅಜ್ಜಿನ ಹುಡ್ಕೊಕಲ್ಲ. ಎಲ್ಯೊಳೊ? ಆಗ ನಮ್ಮ ಯಜಮಾಂತಿಗೆ ಒಂದು ಐಡಿಯಾ ಹೊಳ್ತ್. ನಡುಬೆಟ್ಟು ಕೃಷ್ಣಪ್ಪ ಭಾರತಿ ದಂಪತಿಗಳ ಮಗಳ್ ಕೃತಿ ಹೆತ್ತ್ ಮೂರು ತಿಂಗಳೇನೋ ಆಗಿತ್ತ್. ಅವಳ್ ತೌರುಮನೆಲೇ ಇತ್. ಅವರ ಮನೆ ನಮ್ಮಲ್ಲಿಂದ ಒಂದುವರೆ ಕಿಲೋಮೀಟರ್ ದೂರ. ಅಲ್ಲಿಗೆ ದೂರವಾಣಿ ಕರೆ ಮಾಡಿ ಸಂಗತಿ ತಿಳ್ಸಿಕಾಕನ "ಕೂಸಿಗೆ ಎಣ್ಣೆ ಹಚ್ಚಿ ನಿದ್ದೆ ಮಾಡ್ಸಿಯೊಳೊ. ಎದ್ರ್‌ವ ಹೊತ್ತಾತ್. ಬೇಗ ಬಂದರೆ ನಿಮ್ಮ ಕೆಲ್ಸ ಆದು. ಪೊಟೊ ತೆಗೆಕೆ ನಮ್ಮ ಅಡ್ಡಿ ಏನೂ ಇಲ್ಲೆ" ಅಂತ ಹೇಳ್ದೊ. ಕೂಡ್ಲೆ ಜೀಪುಲಿ ನಮ್ಮವಳೇ ಕಲಾವಿದನ ಕರ್ಕಂಡ್ ಹೋತು. ಕೂಸುನ ಮೀಸಿಕೆ ಕೂಸುನ ಅಜ್ಜಿನ ಅಮ್ಮ ಅಂದರೆ ಮುತ್ತಜ್ಜಿ ಹೊಸೂರು ಸುಂದರನವರ ಮನೆವು ಇದ್ದೊ. ಬೇಕಾದ ಪೊಟೊ ತೆಗ್ದ್ ಬಂದೊ. ಕಲಾವಿದ ಅದೇ ದಿನ ಮಡಿಕೇರಿ ಸ್ಟುಡಿಯೊ ಒಂದಕ್ಕೆ ಹೋಗಿ ಅದರ ಪ್ರತಿ ಮಾಡ್ಸಿ ತಂದ್ ಚಿತ್ರ ತಯಾರಿಗೆ ಸುರುಮಾಡ್ತ್. ಚಿತ್ರ ಪೊರ್ಲಾಗಿ ಮೂಡಿ ಬರ್ತಾ ಇತ್ತ್. ಅದರ ನೋಡಿಕೆಂತೇಳಿ ಪತ್ರಿಕೆ ವರದಿಗಾರ ಶ್ರೀ ಅನಿಲ್ ಹೆಚ್.ಟಿ. ಅವು ನಮ್ಮಲ್ಲಿಗೆ ಬಂದೊ. ಅವ್ಕೂ ಆ ಚಿತ್ರ ನೋಡಿ ಮೆಚ್ಚಿಕೆ ಆತ್. ನಿಮ್ಮ ಚಿತ್ರ ಲಾಯ್ಕಾಗಿ ಮೂಡಿ ಬರ್ತಾ ಉಟ್ಟುಂತೇಳಿ ಕುಸಿ ಪಟ್ಟೊ.

ಗಂಗಾಧರ ಮೂರ್ತಿಯವುಕೆ ಇನ್ನೊಂದು ಚಿತ್ರನೂ ಬುಡ್ಸಿಕೆ ಇತ್ತ್. ಅದ್ ಗೌಡ ಕುಟುಂಬದ ಕೊಡಗಿನ ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ಗುಡ್ಡೆಮನೆ ಅಪ್ಪಯ್ಯ ಗೌಡ್ರ್‌ದ್ದ್. ಅದೂನೂ ಲಾಯ್ಕಾಗಿ ಮೂಡಿ ಬಂದಿತ್ತ್. ಏಪ್ರಿಲ್ ತಿಂಗಳ್ ತಾರೀಕ್ ಏಳರಂದ್ ಹಿಂಬೊತ್ತ್ ಮೂರು ಗಂಟೆಗೆ ಭಾರತಿ ಭವನ ಮಡಿಕೇರಿಲಿ ಚಿತ್ರಕಲಾ ಪ್ರದರ್ಶನಂತ ಗೊತ್ತಾಗಿತ್ತ್. ಆ ದಿನ ಬೊಳ್ಪಿಗೆ ಅಕಾಡೆಮಿ ಅಧ್ಯಕ್ಷರ್ ಅವರ ಊರ್‌ಂದ ಮಡಿಕೇರಿಗೆ ಹೋಗುವ ದಾರಿಲಿ ಕಲಾವಿದರ್ನ ಕರ್ಕಂಡ್ ಹೋಕೆಂತೇಳಿ

ನಮ್ಮಲ್ಲಿಗೆ ಬಂದೊ. ಹೊರ್ಡುವ ಹೊತ್ತಿಗೆ ಕಲಾವಿದರಿಗೆ ನಾಲ್ಕ್ ದಿನ ಉಂಡ ಮನೆ ಮನೆ ಮಂದಿಯರ ಬುಟ್ಟ್ ಹೋಕಲೆಂತೇಳುವ ಅಗಲಿಕೆಯ ಬೇನೆ ಅವರದಾದರೆ ಚಿರ ಪರಿಚಿತನಾದ ಒಬ್ಬ ಒಳ್ಳೆಯ ಕಲಾವಿದ ಇಂದ್ ಹೋದೆಲ್ಲೊಂತೇಳುವ ನೋವು ನಮ್ಮ ಕಾಡ್ತಿತ್. ನಾಲ್ಕ್ ದಿನದ ಹಿಂದೆ ನಾವ್ಗೆ ಅಂವ ಏನೂ ಅಲ್ಲಾಗಿತ್ತ್. ಅವಂಗೆ ನಾವು ಯಾರೋ ಆಗಿದ್ದೊ. ಆದರೆ ಈಗ ಮನ್ಸ್ ಒಂದಾಗಿತ್ತ್. ಏನೋ ಒಂದು ಕಳ್ಕಂಬ ನೋವು. ಮಾನವೀಯ ಸಂಬಂದ ಗಳೇ ಹಾಂಗೆ. ಯಾರು ಏನೂ ಅಲ್ಲದವು ಒಂದಿನ ತೀರ ಹಕ್ಕಲೆ ಆದು, ತೀರ ಹಕ್ಕಲೆನೊವು ತುಂಬಾ ದೂರ ಆದು. ಇದೆಲ್ಲ ಜೀವನದ ತಿರುವುಗ. ಕಲಾವಿದ ಗಂಗಾಧರಮೂರ್ತಿ ಕುಂಚ ಹಿಡ್ದ್ ಹಂತ ಹಂತವಾಗಿ ಚಿತ್ರ ಬುಡ್ಸ್‌ತ್ತಾ ಹೋಕಾಕನ ಕಲೆ ಅರ್‍ಥಿದ ಬಗೆ ಕಂಡ್ ಬೆರ್‍ಗಾಗಿತ್ತ್. ರೇಕೆ, ಬಣ್ಣದೊಂದಿಗೆ ತಾನ್ ಬೆರ್‍ತ್ ಅದರೊಂದಿಗೆ ಮಾತಾಡ್ತಾ ರೂಪು ಕೊಡುವ ಗಮ್ಮತ್ತ್ ನೋಡಿ ವಿಸ್ಮಯ ಪಟ್ಟಿದ್ದೊ.

ಚಿತ್ರಕಲಾ ಪ್ರದರ್ಶನಕೆ ಕೊರೋನಾ ಕಾಟದ ಕಾರಣಕ್ಕಾಗಿ ಹೆಚ್ಚಿನ ಪ್ರಚಾರ ಮಾಡಿತ್ಲೆ. ಚಿತ್ರ ಕಲಾವಿದರ್, ಅಕಾಡಮಿ ಸದಸ್ಯರ್, ಕಲಾವಿದರ್ ಉಳ್ಕಂಡ ಮನೆವು, ಪತ್ರಕರ್ತರ್ ಹೀಂಗೆ ಹೆಚ್ಚ್ ಕಡಿಮೆ ನೂರ್ ಜನ ಸೇರಿದ್ದೊ. ಅಚ್ಚುಕಟ್ಟಾದ ಸರಳ ಕಾರ್ಯಕ್ರಮ. ಕಲಾವಿದರ್ ಬುಡ್ಸಿದ ಚಿತ್ರಗ ಎಲ್ಲಾ ಪೊರ್ಲಾಗಿತ್ತ್. ನಮ್ಮಲ್ಲಿದ್ದ ಚಿತ್ರ ಕಲಾವಿದ ಗಂಗಾಧರಮೂರ್ತಿ ಬುಡ್ಸಿದ ಕೂಸುನ ಮೀಸುವ ಚಿತ್ರ ಎಲ್ಲರ ಮೆಚ್ಚುಗೆ ಪಾತ್ರಾಗಿತ್ತ್. ನಾವ್ಗೂ ಕುಸಿಯಾಗಿತ್ತ್.

ಈ ಚಿತ್ರಗಾರ ಕಾರ್ಯಕ್ರಮ ಅಕಾಡೆಮಿ ಅಧ್ಯಕ್ಷರ್ ಮತ್ತು ಅವರ ವಿದ್ಯಾವಂತ ಬಳಗ ಹಮ್ಮಿಕಂಡ ಕೆಲವು ಕಾರ್ಯಕ್ರಮಗಳ್ಲಿ ಒಂದು. ಈ ಹಿಂದೆ ಅರೆಬಾಸೆ ನಾಟಕ ಆಗಿತ್ತ್. ಅರೆಬಾಸೆಲಿ ಯಕ್ಷಗಾನ ತಾಳಮದ್ದಳೆ ಮತ್ತು ಯಕ್ಷಗಾನ ಬಯಲಾಟನೂ ಆಗಿತ್ತ್. ಅರೆ ಬಾಸಿಕರ ಸಾಂಸ್ಕೃತಿಕ ಹಿನ್ನೆಲೆನ ಗುರ್ತಿಸಿ ಕಟ್ಟಿ ಮುಂದಿನ ಜನಾಂಗಕ್ಕೆ ಉಳ್ಸುವ ಬಗ್ಗೆ ಇಂತಹ ಕಾರ್ಯಕ್ರಮ ಮೆಚ್ಚುವಂತದ್. ಎಲ್ಲರ ನಿರೀಕ್ಷೆಯೂ ಹೌದು. ರಾಜಕೀಯ ಗಾಳಿ ಮಾತ್ರ ಎಲ್ಲೂ ಬೀಸಿಕಾಗದ್. ಇಂತವೇ ಅಂದರೆ ಈ ತರ ಯೋಚ್ನೆ ಮಾಡವೇ ಮುಂದೆ ಅಧ್ಯಕ್ಷರಾಗಿ, ಸದಸ್ಯರಾಗಿ ಬಂದ್ ಅಕಾಡಮಿ ಸ್ಥಾಪನೆಯ ಗುರಿಯತ್ತ ದಿಟ್ಟ ಹೆಜ್ಜೆ ಇಡುವಂತಾಗಲಿ ಎಂಬುದೇ ನಮ್ಮ ಹಾರೈಕೆ.

---

**ಕುಯಿಂತೋಡು ದಾಮೋದರ**
ಚೆಂಬು ಗ್ರಾಮ, ಬಾಲೆಂಬೆ ಅಂಚೆ
ಮೊಬೈಲ್ : 9901315963

# ಕರ್ನಾಟಕದ ಪ್ರಮುಖ ಆಹಾರ ಬೆಳೆಗೊಂದ್ ಅಪಾಯದ ಕರೆಗಂಟೆ ಕಾದುಟ್ಟೋ?

● ಕಾವೇರಿಮನೆ ಪ್ರೊ. ಬೋಜಪ್ಪ

ಅಪಾಯದ ಕರೆಗಂಟೆಂತ ಹೇಳ್ದ ಕೂಡ್ಲೆ ಭಯಪಡ್‌ಬ್ಯಾಡಿ. ಹಂಜ ಕಾಯಿನಿ. ಆಮೇಲೆ ಗೊತ್ತಾದೆ. ಹಂಗಾದರೆ, ಇದ್ ಎಂತ ಅಪಾಯಂತ ಹೇಳಕೊನೆ ಅಲ್ಲಾ? ನಮ್ಮ ಕರ್ನಾಟಕದ ಎಲ್ಲಾ ಜನಕ್ಕೆ ಇದರ ಮುಖ್ಯ ಆಹಾರದ ಬೆಳೆ 'ಭತ್ತ'ಂತ ಗೊತ್ತೇ ಉಟ್ಟಲ್ಲಾ? ಭತ್ತ ಆದ ಮೇಲೆ ಗೋದಿ, ರಾಗಿ, ಜೋಳ ಮತ್ತೆ ಕಿರುದಾನ್ಯಂತೇಳ್ವ ಸಜ್ಜೆ, ನವಣೆಂತ ಹೇಳಕ್. ಹಿಂಗೆ ಹೇಳಿ ಮುಟ್ಟ ಮಾತ್ರಕ್ಕೆ ಈ ಎಲ್ಲಾ ಬೆಳೆಗೆ ಎಲ್ಲಾ ಕಡೆ ಸರಿ–ಸಮಾನಾಗಿ ಬೆಳೆಯದಿಲ್ಲೆ.

ಕೊಡಗ್, ದಕ್ಷಿಣ ಕನ್ನಡ, ಉತ್ತರಕನ್ನಡ, ಹಾಸನ, ಚಿಕ್ಕಮಗಳೂರ್, ಶಿಮೊಗ್ಗ ಹಂಗೆನೇ ಇವ್‌ಗಳ ಸುತ್ತ–ಮುತ್ತಲಿ, ಭತ್ತನೇ ಪ್ರಧಾನ ಬೆಳೆಂತಾದರೆ, ಮೈದಾನ ಪ್ರದೇಶಗಂತ ಹೇಳ್ವ ಮೈಸೂರ್, ಮಂಡ್ಯ, ಕೋಲಾರ್, ತುಮುಕೂರ್ ಕಡೆಗಳ್ಲಿ ಭತ್ತದ ಬೆಳೆ ಆದ ಮೇಲೆ ರಾಗಿ, ಜೋಳ, ಗೋದಿ ಇವ್‌ಗಳ್ನೆಲ್ಲಾ ಬೆಳ್ದವೆ. ಇನ್ನ್ ಉತ್ತರಕನ್ನಡನ ತಕಂಡ್ರೆ, ಹೆಚ್ಚ್–ಕಮ್ಮಿ ಅಲ್ಲಿ ಎಲ್ಲಾ ಜಿಲ್ಲೆಗಳ್ಲಿ ಭತ್ತ ಆದಮೇಲೆ 2ನೇ ಬೆಳೆಯಂದ್ರೆ ಜೋಳ, ಆಮೇಲೆ ಗೋದಿ, ರಾಗಿ ಹಂಗೆನೇ ಸಾಕಷ್ಟ್ ಮಟ್ಟಿಗೆ ಸಜ್ಜೆ, ನವಣೆ ಇವ್‌ಗಳ್ನೆಲ್ಲಾ ಬೆಳೆದು ರೂಡಿಂತ ಹೇಳಕ್.

ಈ ಸಂಗತಿನ್ನೆಲ್ಲಾ ಕಿವಿಗೆ ಹಾಕಂಡ್ರೆ, ಇಡೀ ಕರ್ನಾಟಕಲಿ ಎಲ್ಲಾ ಕಡೆ ಭತ್ತನೇ ಪ್ರಧಾನ ಬೆಳೆಂತ ಖಂಡಿತ ಎಲ್ಲವೂ ತಿಳ್ಕಣಕು ಅಲ್ಲಾ? ಇದ್ ಸತ್ಯ ಆಗಿರ್ಕನ ನಮ್ಮ ಕರ್ನಾಟಕಲಿ ಅನ್ನ ತಿನ್ನದವೇ ಇಲ್ಲೆಂತ ಹೇಳಕ್. ಆದ್ರೆ ರಾಗಿ ಮತ್ತೆ ನವಣೆ, ಸಜ್ಜೆಗೆ ಎಷ್ಟೋ ಕಡೆ ಬೆಳೆದೂ ಇಲ್ಲೆ – ತಿಂಬದೂ ಇಲ್ಲೆ. ಇದೊಂದು ಆಶ್ಚರ್ಯನೇ ಸರಿ. ಒಟ್ಟಾರೆ ಹೇಳಕುಂತಾದ್ರೆ ನಮ್ಮ ಕರ್ನಾಟಕಲಿ ನಂ.1 ಪ್ರಮುಖ ಆಹಾರದ ಬೆಳೆ ಖಂಡಿತಾಗಿ ಭತ್ತ. ಇಂಥ ಬೆಳೆನೇ ಕರ್ನಾಟಕಲಿ ಹೆಚ್ಚಿನ ಕಡೆ ಮೆಲ್ಲ ಮೆಲ್ಲನೆ ಮಾಯ ಆಗ್ತಾ ಬರುತ್ತುಟ್ಟುಂತ ಹೇಳ್ರೆ ಆಶ್ಚರ್ಯ ಅಲ್ಲಾ?

ಇಲ್ಲಿಗೆ ಮುಟ್ಟ ನಾನ್ ಬರ್‌ದದ್ದ್ ಈ ವಿಚಾರದ ಒಂದ್

ಮುನ್ನುಡಿಂತ ಹೇಳಕ್. ಆದ್ರೆ ನಾನ್ ಈಗ ಬರೆಕ್ಕೆ ಸುರುಮಾಡ್ದ ಲೇಖನದ ಮುಖ್ಯ ಗುರಿ ಏನ್‌ಂತೇಳ್‌ರೆ, ಅನಾದಿ ಕಾಲಂದೇ ಕೊಡಗ್, ದಕ್ಷಿಣ ಕನ್ನಡ, ಉತ್ತರಕನ್ನಡ, ಚಿಕ್ಕಮಗಳೂರ್, ಹಾಸನ, ಶಿಮೊಗ್ಗ ಮತ್ತೆ ಸುತ್ತ್-ಮುತ್ತ್ ಲಿ ಭತ್ತನೇ ಪ್ರಧಾನ ಬೆಳೆ ಆಗಿದ್ದದ್ ಇಂದ್ ಈ ಕಡೆ ಎಲ್ಲಾ ಅದರ ಅವಸಾನದ ಕಡೆ ಜೋರಾಗಿ ಹೆಜ್ಜೆ ಹಾಕ್‌ತ್ತಾ ಉಟ್ಟುಂತ್ತಾ ನಿಮ್ಗೆ ಆಶ್ಚರ್ಯ ಆದು. ಈ ಕಠಿಣ ಸಂಗತಿನೇ ನಾನ್ ಮೊದ್ಲೇ ಹೇಳ್ದ 'ಅಪಾಯದ ಕರೆಗಂಟೆ'ಂತ.

ಈ ವಿಷಯಲಿ ಇಂದ್‌ನ ಸ್ಥಿತಿನ ತಿಳ್‌ಕಂಬಕೆ ಹೋದ್ರೆ, ಕೊಡಗ್, ದಕ್ಷಿಣ ಕನ್ನಡ, ಉತ್ತರಕನ್ನಡ, ಶಿಮೊಗ್ಗ, ಚಿಕ್ಕಮಗಳೂರ್ ಹಿಂಗೆ ಉಳಿದ ಮಲೆನಾಡ್ / ಕರಾವಳಿ ಪ್ರದೇಶಗಳ್ಲಿ ಹೆಚ್ಚಿನ ರೈತರ್ ಭತ್ತ ಬೆಳೆದನ್ನೇ ನಿಲ್ಲಿಸುತ್ತಾ ಬರ್ರೊತ್ತುಳೊ. ಇದ್ ಒಂದ್ ಬಹಳ ಅಪಾಯಕಾರಿ ಬೆಳವಣಿಗೆಂತ ತಿಳ್ಕಂಡ್ ಸರ್ಕಾರದವು, ಕೃಷಿ ಮತ್ತೆ ತೋಟಗಾರಿಕೆ ಇಲಾಖೆಯವು, ಆಹಾರ ಮತ್ತೆ ನಾಗರೀಕ ಸರಬರಾಜ್ ಇಲಾಖೆಯವು, ಮತ್ತೆ ಉಳ್ದೆವೆಲ್ಲಾ ಕೂಡಿಕಂಡ್, ಇದೊಂದ್ ಕಠಿಣ ಸಮಸ್ಯೆನ ಮುಂದೆ ಹೋಕೆ ಬುಡದೆ, ಇಲ್ಲಿಗೇ ನಿಲ್ಸುವ ಕಾರ್ಯಕ್ರಮನ ಜರೂರಾಗಿ ತಕಣೊಕುಂತ ನಾ ಹೇಳ್ನೆ, ಸರಿನಾ?

ಮಲೆನಾಡ್ ಮತ್ತೆ ಕರಾವಳಿ ಪ್ರದೇಶಗಳ್ಲಿ ನೀವ್ ಯಾವ್ದೇ ಕಡೆ ಹೋಗಿ ನೋಡ್ದರೆನೂ ಎಲ್ಲಾ ಕಡೆ ಭತ್ತದ ಗದ್ದೆಗ ಪಾಳ್ ಬಿದ್ದಿರ್ರುದ್ದ ಕಂಡದೆ. ಕೊಡ್ಗಿನಲ್ಲಂತು, ಗದ್ದೆಗಳ ಕಾಫಿ, ಕರಿಮೆಣ್ಸ್, ಅಡಿಕೆ, ಆಲ್‌ಸ್ಪೈಸ್ (All-spice) (ಒಂದ್ ರೀತಿನ ಸಂಬಾರದ ಬೆಳೆ), ಬಾಳೆ ಮತ್ತೆ ದಕ್ಷಿಣ ಕನ್ನಡ ಕಡೆ ಅಡಿಕೆ, ರಬ್ಬರ್ ಹಿಂಗೆ ಬೆಳ್ದ್ ಬುಟ್ಟೊಳೋ. ಇಷ್ಟೇ ಅಲ್ಲದೆ, ಎಲ್ಲಾ ಕಡೆ ಶುಂಟಿ, ಅರಸಿಣ ಬೆಳೆಗಳ ಅಬ್ಬರ ಹೆಳಿಕ್ಕೇ ಬತ್ತ್. ಇನ್ನೊಂದ್ ಸಂಗತಿ ನಿಮ್ಗೆ ಗೊತ್ತಾ? ಈ ಶುಂಟಿ, ಅರಸಿಣ ನಮ್ಮ ರೈತರ್ ಮಾತ್ರ ಬೆಳೆದು ಅಲ್ಲ, ಕೇರಳಂದ ರೈತರ್ ಸಾಲ್-ಸಾಲಾಗಿ ಕೊಡ್ಗಿಗೆ ಬಂದ್ ಭತ್ತದ ಗದ್ದೆಗಳ್ನ ಗೇಣಿಗೆ ತಕೊಂಡೋ, ಅಲ್ಲ ಬೇರೆ ಯಾವ್‌ದೊ ಒಪ್ಪಂದ ಮಾಡಿ ಕಂಡ್ ರಾಶಿ-ರಾಶಿ ಶುಂಟಿ ಬೆಳ್ದ್ ಜೇಬ್ ತುಂಬ್ಸಿಕಂಡ್ ಕುಸೀಲಿ ಕೇರಳಕೆ ಹೋಗಿ ಮತ್ತೆ ವಾಪಾಸ್ ಬಾವ ತಮಾಷೆನ ನೀವ್ ನೋಡೋಕು. ಹಿಂಗೆ, ಈ ಬೆಳೆಗಳೆಲ್ಲಾ ಗದ್ದೆಗಳ್ನ ನುಂಗಿ ಹಾಕಿ, ಎಷ್ಟೋ ಜನ ದಢೀರ್ ದುಡ್ಡ್ ಮಾಡಿಕಂಡ್ ಬುಟ್ಟೊಳೋ. ಕೆಲ ವರ್ಷಗಳ ಹಿಂದೆ ಈ ಶುಂಟಿನ ಬೆಳ್ದ್ ಬೆಳ್ದ್ ಗದ್ದೆಗಳೇ ನಿಸ್ಸಾರ ಆದದನ್ನ ಕಾಂಬಕನ

ಸರ್ಕಾರವು ಶುಂಟಿ ಬೆಳಿಕೆ ಬತ್ತ್‌ಂತ ಆಜ್ಞೆ ಹೊರ್ಡಿಸಿರೂ ಜನ ಕೇರೇ ಮಾಡದೆ ಮೂರು ಕಾಸಿನ ಪ್ರಯೋಜನೂ ಆತ್ಲೆ. ಹಂಗೇ ಮುಂದೆ – ಮುಂದೆಗೆ ಇದ್ದ ನಡ್ಕಂಡ್ ಹೋಕಾಕನ ಇದ್ಕೆ ರೈಜೋಮ್‌ರಾಟ್ (Rhizome rot) ಂತ ಒಂದು ಕಾಯಿಲೆ ಕಾನ್ಸಿಕಂಡದರ್‌ಂದ ಇದರ ಬೆಳೆ ಸ್ವಲ್ಪ ಮಟ್ಟಿಗೆ ಕಮ್ಮಿ ಆತಷ್ಟೆ. ಅದೇನಿದ್ದರೂ ಈ ಬೆಳೆಗಳೆಲ್ಲಾ ಭತ್ತದ ಗದ್ದೆಗಳ್ನ ನುಗ್ಗಿ ಈಗ ಜನ ಭತ್ತ ಬೆಳೆದನ ಬುಡುತ್ತಾ ಬರ್‌ತ್ತೊಳೋ.

ಈ ಸಮಸ್ಯೆಗೆ ನಮ್ಮ ರೈತಭಾಂದವರ್ನ ಕೇಳ್ರ್, ಎಲ್ಲವೂ ಕೊಡ್ವ ಉತ್ತರ ಒಂದೇ. ಏನೆಂದ್ರೆ, ಭತ್ತದ ವ್ಯವಸಾಯ ಕಠಿಣ ಶ್ರಮದ ವ್ಯವಸಾಯ, ಕಷ್ಟಪಟ್ಟ್ ಬೆಳ್ದ್‌ರೂ, ಬೆಲೆ ಇಲ್ಲದೆ ನಮ್ಗೆ ಮೂರ್ ಕಾಸ್ ಲಾಬ ಬಾರದೆ ನಾವ್ ಕಂಗಾಲ್ ಆಗ್‌ತ್ತ್ ಒಳೊ. ಅದ್ಕೆನೇ ಹೆಚ್ಚ್ ಲಾಬ ಕೊಡ್ವ ಈ ಬೆಳೆಗಳೆಲ್ಲಾ ಬೆಳೆತೊಳಾಂತ ಹೇಳ್ವೆ. ಅವರ 2ನೇ ಹವಾಲ್ ಏನ್ ಕೇಳ್ರೆ, ಹಿಂದಿನಂಗೆ ನಮ್ಮ ಮಕ್ಕ ಮನೆಲಿ ಕುದ್ದ್‌ಕಂಡ್ ಇರ್ಕೆ ತಯಾರಿಲ್ಲೆ. ಅವೆಲ್ಲಾ ಹೆಚ್ಚ್–ಹೆಚ್ಚ್ ವಿದ್ಯೆ ಕಲ್‌ತ್‌ಕಂಡ್ ದೇಶ–ವಿದೇಶಗಳ್ಲಿ ಚಾಕ್ರಿ ಮಾಡ್‌ತ್ತಾ ಒಳೊ, ಹಂಗಿರ್ಕ್ನ ಭತ್ತ ಬೆಳಿಕೆ ಜನ ಎಲ್ಲಿ ಒಳೋಂತ ಕೇಳ್ವೆ. ಸರಿಯಪ್ಪ, ಅಪ್ಪ–ಅವ್ವ ಕಷ್ಟ ಪಟ್ಟ್ ಮಕ್ಕಳ್ನ ಓದಿಸಿ, ಅವ್ ಚಾಕ್ರಿ ಮಾಡಿ ಹಣ ಸಂಪಾದಿಸಿಕೆ ಅವ್ಕೆ ಕುಸಿ ಅಲ್ಲಾ? ಇದೂ ಅಲ್ಲದೆ, ಈ ಮಕ್ಕ ನಾವ್ ಮುದಿಮುದಿ ಆಕನ ನಮ್ನ ಕಾಪಾಡಿವೆಂತ ಆಸೆ ಇರ್ದು ಸಹಜ ಅಲ್ಲಾ? ಈಗ ಕೇಳಿಕಣಿ, ಅಂಥ ವಯಸ್ಕರ್ಗೆ ಒಂದ್ ಕಿವಿಮಾತ್ ಏನ್‌ಂತೇಳ್ರ್, ಈ ತರದ ಆಸೆಗಳೆಲ್ಲ ಹೆಚ್ಚಾಗಿ ನಿರಾಶೆ ಆಗಿನೇ ಹೋಗ್‌ಕ್ಕುಟ್ಟು. ಹಂಗಾಗಿ, ಮಕ್ಕಳ ಮೇಲೆ ಬಾರೀ ಮೋಹ ಇಟ್ಟ್‌ಕಂಡ್ ನಿಮ್ಮ ಸರ್ವಸ್ವವನ್ನೆಲ್ಲಾ ತ್ಯಾಗ ಮಾಡಿ ಬುಡ್‌ಬೇಡಿ. ನಿಮ್ಮ ಬದ್ರತೆನ ನೀವೇ ಕಾದ್‌ಕೊಳ್ವ ಕಾಲ ಇದ್, 'ಎಚ್ಚರಿಕೆ'. ಆ ಕಡೆ ಹೋದವ್ ಆ ಕಡೆಗೇನೇ – ಈ ಕಡೆ ಇದ್ದ ನೀವ್ ಈ ಕಡೆಗೆನೇ.

ಭತ್ತ ಬೆಳೆಯಕ್ಕೆ ಇಷ್ಟ ಇಲ್ಲದವು ವ್ಯವಸಾಯ ಮಾಡ್ಕೆ ಜನನೇ ಇಲ್ಲಂತ ಹೇಳ್ರೆ, ನಾನ್ ಅವರ್ನ ಕೇಳ್‌ದು ಏನ್‌ಂತೇಳ್ರೆ – ವಿದ್ಯಾವಂತ ಮಕ್ಕ ಎಲ್ಲಾ ಹೊರಗೆ ಹೋದಪ್ಪ, ಆದ್ರೆ ಅಂದ್ ಹೆಚ್ಚ್ ವಿದ್ಯೆ ಕಲಿಯದವು ಬೇಸಾಯವೇ ಹಿಡ್ಕ್‌ಂಡ್ ಇದ್ದ ಮದ್ಯ ವಯಸ್ಸ್‌ನವ್ ಈಗ ಮತ್ತೆ ಹೆಚ್ಚ್ ವಿದ್ಯೆ ಕಲ್ತ್ ಅವೂ ಚಾಕ್ರಿ ಮೇಲೆ ಹೋಗಿ ಬುಟ್ಟೊಳೋ, ಇವೆಲ್ಲಕೆ ಹಂಗಾದರೆ, ಅವ್‌ಅದರೂ ತಮ್ಮ – ತಮ್ಮ ಹೊಟ್ಟೆ ತುಂಬಿಸಿಕಂಬಕ್ಕೆ ಒಂದಿಷ್ಟಾದರ್ ಬೆಳೆಬಾರದಾಂತ? ಸರಿ ತಾನೆ. ಅಷ್ಟೂ ಮಾಡದೆ

ಗದ್ದೆಗಳ್‌ಲ್ಲಾ ಹಡಲ್ ಬುಟ್ಟರೆ ಮುಂದೆನ ಗತಿ ಏನ್?

ರೈತರ ಜೀವ್ನ ಕಷ್ಟದ್ದಂತ ಎಲ್ಲವುಕ್ಕೂ ಗೊತ್ತು. ಅದರ್ಲೂ ರೈತನಾಗಿ ದುಡ್ದವಂಗೆ ಇದರ ಕಷ್ಟ ಹೆಚ್ಚಗೆ ಗೊತ್ತುಟ್ಟು. ಆದ್ರೆ ಭತ್ತದ ಬೆಳೆ ಕಡೆಗೆ ಬೆನ್ನ್ ಹಾಕಿ ನಿಂತವೇ ಹೇಳಿಕಂಬಾಂಗೆ – ನಮ್ಗೆ ಈ ಬೆಳೆಂದ ಏನ್ ಲಾಭ ಇಲ್ಲೆ. ಹಂಗಾಗಿ ನಾವೆಲ್ಲಾ ಸಪ್ಪೆ ಆಗಿ ಬುಟ್ಟೊಳೊ. ಅದ್ಕನೇ ಸ್ವಲ್ಪ ದಢೀರ್ ದುಡ್ಡ್ ಮಾಡಿಕಂಬಕ್ಕೆ ಹೆಚ್ಚಿನ ಲಾಭ ಕೊಡ್ವ ಈ ಬೆಳೆಗಳೆಲ್ಲಾ ಬೆಳಿಯಕೆ ಸುರ್ ಮಾಡ್ದಂತೇಳ್ವೆ. ಈ ರೀತ್ಲಿ ಮಾತಾಡ್ರೆ, ಇಂಥವರ್ದ್ ಧುರಾಳೆಂತ ಹೇಳಕ್ಕಲ್ಲಾ ಹೇಳಿ? ಅದೇನಿದ್ರೂ ಅವರವ್ನ ಗದ್ದೆಲಿ ಹಂಜ ಆದರೂ ಭತ್ತ ಬೆಳೆದ್ ಅವರ ಹೊಟ್ಟೆ ತುಂಬ್ಸಿಕೊಳ್ಳುವ ಗ್ಯಾನ ಅವ್ಕೆ ಯಾಕೆ ಬಾದ್ಲೆಂತ ಗೊತ್ತಾದ್ಲೆ. ಅವರ ಗ್ಯಾನ ಏನ್‌ಂತೇಳ್ರ್, ಜೇಬ್ ತುಂಬಾ ದುಡ್ಡ್ ಮಾಡಿಕಂಡ್, ಚಿನ್ನದ ಬೆಲೆಂತಾದರೂ ಬೇರೆ ಕಡೆಂದ ಅಕ್ಕಿ ತಕಂಡ್ ಬದ್‌ಕನಾಂತ. ಇಂಥವ್ಕೆ ನೀವ್ ಏನ್ ಹೇಳಿಯರಿ? ಮುಂದೆಗಲ್ಲ, ಈಗಾಗಲೇ ಅಕ್ಕಿ ಕೊಂಡುಕೊಂಡೇ ಹೊಟ್ಟೆ ತುಂಬ್ಸಿಕೊಳ್ಳುವ ಸ್ಥಿತಿ ಬಂದೇ ಬುಟ್ಟುಟ್ಟು. ಹಂಗಾದರೆ, ಇಂಥ ರೈತರ್ ಎಷ್ಟ್ ಸಮಯಂತ ಹೊರ ಅಕ್ಕಿ ತಕಂಡ್ ತಿದ್ದವೆಂತಾ? ಒಂದ್ ವೇಳೆ ಹೊರ ಅಕ್ಕಿನೂ ನಿಂತ್ ಹೋದರೆ, ಮತ್ತೆ ಎಲ್ಲಿ ಭಿಕ್ಷೆ ಬೇಡುದು?

ಅನಾದಿ ಕಾಲಂದ ಇಂದ್‌ನವರೆಗೆ ಸಮೃದ್ಧಿಯಾಗಿ ಬಂದ ನಮ್ಮ ಕರ್ನಾಟಕ್ಕೆ ಎಂದೂ ಕೂಡ ಈ ಸ್ಥಿತಿ ಬಾಕೆಬತ್ತ್. ಇಂದ್‌ಗಿಂತ ನಾಳೆ ಹೆಚ್ಚ್ ಹೆಚ್ಚ್ ಬೆಳೆಯಕೂಂತ ನಮ್ಮ ಸರ್ಕಾರದ ಧೋರಣೆ ಇರ್‌ಕನ, ಮುಂದೆ – ಮುಂದೆ ಹೋದ್ ಬುಟ್ಟ್, ಹಿಂದೆಗೆ ಕಾಲ್ ಹಾಕುದು ಸರಿನಾ? ಹಂಗಾಗಿ, ಅಪಾಯದ ಕರೆಗಂಟೆ ಜೋರಾಗಿ ಹೊಡ್ಕಂಬಕ್ಕೆ ಮೊದ್ಲೆ, ಘನ ಸರ್ಕಾರ ಮತ್ತೆ ಸಮ್ಮಂದಪಟ್ಟ ಕೃಷಿ ಇಲಾಖೆ / ತೋಟಗಾರಿಕೆ ಇಲಾಖೆ ಎಲ್ಲವೂ ಸೇರಿಕಂಡ್ ಸರಿಯಾದ ಜಾಗ್ರತೆ ಮಾಡೋಕು.

ಹಂಗಾದರೆ, ಯಾರ್‍ಯಾರ್ ಏನೇನ್ ಮಾಡಕುಂತ ಸರಿಯಾಗಿ ಗ್ಯಾನ ಮಾಡೋಕು. ಅದ್ಕೆ ಮುಂಚೆ, ಈ ಕಠಿಣ ಸಮಸ್ಯೆನ ಬಗ್ಗೆ ನನ್ನ ಅಭಿಪ್ರಾಯ ಸರಿನೋ ತಪ್ಪುನೋಂತ ತಿಳ್ಕಂಬಕ್ಕೆ ಸರ್ಕಾರ ಒಂದ್ ಸಮಿತಿನ ರಚಿಸಿ, ಅವು ಕರ್ನಾಟಕದ ಎಲ್ಲಾ ಕಡೆ ಸುತ್ತಾಡಿ (ಅಲ್ಲಿನೂ, ಹೆಚ್ಚಾಗಿ ಮಲೆನಾಡ್ ಮತ್ತೆ ಕರಾವಳಿ ಪ್ರದೇಶಗಲ್ಲಿ) ಬಂದರೆ, ನಿಜಸ್ಥಿತಿ ಗೊತ್ತಾದೆಂತ ನನ್ನ ಅಭಿಪ್ರಾಯ. ಆಮೇಲೆ ವಾಸ್ತವ ಸ್ಥಿತಿಗೆ ಸರಿಯಾಗಿ ಸೂಕ್ತ ಕ್ರಮಗಳ ಕೈಕೊಳ್ಳಕ್. ಈ ಸಮಿತಿಯಲ್ಲಿ ಮುಖ್ಯವಾಗಿ ಸರ್ಕಾರದ ಪ್ರತಿನಿಧಿ,

ಮಲೆನಾಡ್ ಮತ್ತೆ ಕರಾವಳಿ ಪ್ರದೇಶಗಳ್‌ಂದ ಆರ್ಸಿ ಬಂದ ವಿಧಾನ ಸಭಾಸದಸ್ಯರ್, ರೈತ ಮುಂದಾಳ್ / ಹಿತೈಸಿಗ, ಅಲ್ಲದೆ, ಕೃಷಿ ಮತ್ತಿತರ ಇಲಾಖೆಗಳ ಅಧಿಕಾರಿಗ ಇದ್ದರೆ ಒಳ್ಳೆದ್. ಇದ್ನ ಹೇಳ್ವ ಅಧಿಕಾರ ನಂಗಿಲ್ಲೆ. ಇದೆಲ್ಲಾ ಸರ್ಕಾರದ ಅಧಿಕಾರ. ಅದೂ ಅಲ್ಲದೆ 5/10 ವರ್ಷಗಳಿಂದೀಚೆಗೆನ ವರ್ಷವಾರ್ ಭತ್ತ ಎಷ್ಟ್ ಬೆಳೆದುಟ್ಟು ಕರ್ನಾಟಕಲಿಂತ ತಿಳ್ಕಂಡರೆ, ಇದರ ಇಂದ್‌ನ ಸ್ಥಿತಿ–ಗತಿ ಗೊತ್ತಾದೆ ಅಲ್ಲಾ? ಅದೇನಿದ್ದರೂ ಇದ್ ಕೃಷಿ ಇಲಾಖೆನ ಅಧಿಕಾರಿಗಳಿಗೆ ಸಮ್ಮಂದ ಪಟ್ಟದ್.

ನಾನ್ ಕಡೇದಾಗಿ ಹೇಳ್ಕೆ ಇಷ್ಟಪಡುದು ಏನ್‌ಂತೇಳ್ರೆ, ಇದೊಂದು ನನ್ನ ದೃಷ್ಟಿಲಿ ಕಠಿಣ ತರದ ಸಮಸ್ಯೆಂತೇಳಿ, ಇದ್ ಕೈ ಮೀರಿ ಹೋಕೆ ಮುಂದೆ, ಘನ ಸರ್ಕಾರದವು ಸೂಕ್ತ ಕ್ರಮನ ತಕಂಡ್, ಕರ್ನಾಟಕದ ಜನ ತಮ್ಮ ತಮ್ಮ ಹೊಟ್ಟೆ ತುಂಬಿಸಿಕಂಬಕ್ಕೆ ಪರ ಊರಿನ ಕಡೆಗೆ ಕೈಚಾಚದೆ ಕರ್ನಾಟಕದ ಹಿರಿಮೆ ಎಂದೆಂದಿಗೆನೂ ಹಿರಿಮೆ ಆಗಿನೇ ಉಳಿಯೋಕುಂತ ನನ್ನ ಮನದಾಳದ ಮಾತ್.

ನಾನೊಬ್ಬ ಕೊಡಗಿನವನಾಗಿ, ತೋಟಗಾರಿಕಾ ಪ್ರಾಧ್ಯಾಪಕನಾಗಿ, ಸಂಶೋಧಕನಾಗಿ, ರೈತರ ಹಿತಚಿಂತಕನಾಗಿ, ಹಂಗೆನೇ ಸಾಮಾಜಿಕ ವಿಷಯಗಳ ಬರಹಗಾರನಾಗಿ ನನ್ನ ಈ 92ರ ಇಳಿ ವಯ್ಸ್‌ಲಿ ಹಂಜ ಬಿಡ್‌ವ್ ಮಾಡಿಕಂಡ್ ಈ ಲೇಖನನ ಬರೆದೊಳೆ. ಮತ್ತೊಮ್ಮೆ ಭತ್ತ ಬೆಳೆತ್ತಿದ್ದ ಎಲ್ಲಾ ರೈತ ಬಾಂಧವಕ್ಕೆ ಒಂದೇ ಒಂದ್ ಮಾತ್. ಏನೆಂದ್ರೆ, ಕಷ್ಟ ಇಲ್ಲದ ಜೀವನ ಇಲ್ಲೆ. ನಿಮ್ಗೆ ಏನೇ ಕಷ್ಟ–ನಷ್ಟಗ ಒದಗಿ ಬಂದರೂ, ನಿಮ್ಮ ಹವಾಲ್ ಏನಿದ್ದರೂ ನಿಮ್ಮ ಮತ್ತೆ ನಿಮ್ಮ ಸಂಸಾರದ ಹೊಟ್ಟೆ ತುಂಬಿಸಿಕೊಳ್ಳುವಷ್ಟಾದರೂ ಭತ್ತ ಬೆಳ್ದ್, ಸರ್ಕಾರದ ಆಜ್ಞೆನ ಮೀರದೆ, ಅವರೊಟ್ಟಿಗೆ ಸಹಕರಿಸಿ, ನಮ್ಮ ಕರ್ನಾಟಕದ ಜನತೆ ಪರ ಊರಿನ ಕಡೆಗೆ 'ಅಕ್ಕಿ ಕೊಡಿಂತ' ಕೈ ಚಾಚದಂತೆ ನೋಡಿಕಂಬದು ನಿಮ್ಮೆಲ್ಲರ ಆದ್ಯ ಕರ್ತವ್ಯಂತ ಹೇಳ್‌ತ್ತಾ, ಭತ್ತವೊಂದರ ಕಡೆ ಮಾತ್ರ ಅಲ್ಲದೆ, ಇತರ ಆಹಾರದ ಬೆಳೆಗಳನ್ನೂ ಬೆಳೆವ ದೊಡ್ಡ ಮನಸ್ಸು ನಿಮ್ಗೆ ಹುಟ್ಟಲೀಂತ ನಾನ್ ಹಾರೈಸಿ ಶುಭ ಕೋರುತ್ತಾ ಒಳೆ.

---

**ಕಾವೇರಿಮನೆ ಪ್ರೊ| ಬೋಜಪ್ಪ**
# 414, 'ಅನುಗ್ರಹ', 3ನೇ ಮುಖ್ಯರಸ್ತೆ, ಹೆಚ್.ಎಂ.ಟಿ. ಲೇಔಟ್
ಆನಂದನಗರ, ಬೆಂಗಳೂರು – 560 024
ಮೊಬೈಲ್ : 9738450971



# ಪೊಲ್ಲುಲಿ ಮಾತಾಡಿಕೆ ಬೊತ್ತಾ?

● ಕೊಟ್ಟಕೇರಿಯನ ಲೀಲಾ ದಯಾನಂದ

ಇತ್ತೀಚೆಗೆ ಒಂದ್ ಸುದ್ದಿನ ಓದಿದೆ. ಒಂದ್ ಸಂಸಾರದವ್ಕೆ ಕೊರೋನಾ ಕಾಯಿಲ್ ಬಂದಿತ್ತ್. ಗಂಡ–ಹೆಣ್ಣ್–ಮಕ್ಕ ಎಲ್ಲವೂ ಮನೆಲೇ 'ಕ್ವಾರಂಟೈನ್' (quarantine) ಆಗಿದ್ದ್ ಉಸಾರದೊಗಡ. ಆ ಸಮಯಲೂ, ಮತ್ತೆ ಅವಕೆ ಗುಣಕಂಡ ಮೇಲೆ ಸನಾ ನೆರೆಕರೆಯವು ಅವರ್‌ನ ಕಂಡರೆ ಮಾತ್‌ಕತೆಯಾಡದೆ ದೂರ ಹೋತಿದ್ದೊಗಡ. ಕೊರೋನಾನೆ ಎದುರ್‌ಸಿ ಉಸಾರಾಗಿ ಬಂದವು ಅಕ್ಕಪಕ್ಕದವರ ಈ ನಡವಳ್‌ಕೆಂದ ಬೇಜಾರಾಗಿ ಆತ್ಮಹತ್ಯೆ ಮಾಡಿಕಂಡೊಗಡ. ಓದಿ ಎದೆ ಧಸ್‌ಕ್‌ತಾತ್! ಮನ್‌ಸರ ಮಾತಿಗೆ ಇಷ್ಟೊಂದ್ ಸಕ್ತಿ ಉಟ್ಟಾ? ಹೌದು, ಒಬ್ಬನ ಮನ್‌ಸಂದ ಬಾವ ಮಾತಿಗೆ ಒಬ್ಬಂಗೆ ಜೀವ ಕೊಡುವಷ್ಟು ಹಂಗೆನೇ ಒಬ್ಬನ ಜೀವ ತೆಗೆದ್ ಬುಡುವಷ್ಟು ಸಕ್ತಿ ಉಟ್ಟು. ನಂಗೆ 'ಕೊರೋನಾ' ಆಗಿರ್‌ಕನ ಬೇಕಾದವು, ಸಿನೇತಂಗ, ನೆಂಟಂಗ, ನೆರೆಕರೆಯವು ಆಡ್‌ದ ಪ್ರೀತಿಂದ, ಕಾಳಜಿಂದ ಕೂಡ್‌ದ ಮಾತ್‌ಗ ಆ ಸಮಯಲಿ ನನ್ನ ಮನ್‌ಸಿಗೆ ಅದೆಷ್ಟು ಧೈರ್ಯ ಕೊಟ್ಟತೂತ ಹೇಳ್‌ದು ನಂಗೇ ಗೊತ್ತು!

ಮಾತೂ ತೇಳುದು ಮನ್‌ಸಂಗೆ ಮಾತ್ರ ಆ ಪರಮಾತ್ಮ ಕೊಟ್ಟಂತ ವರ. ನಮ್ಮ ಮನಸ್ಸ್ನ ಭಾವನೆಗಳ್‌ನ್ನ ಹೇಳಿಕಂಬಕೆ – ಹಂಚಿಕಂಬಕೆ ಆದು ಮಾತ್‌ನ ಮೂಲಕ ಮಾತ್ರ. ಮರಗಟ್ಟಿ ಹೋದ ಮೈಮನಸ್ಸ್‌ಗಳ್‌ನ ಅರಳಿಸುವಂತ ಸಕ್ತಿ ಮಾತಿಗುಟ್ಟು. ಪ್ರತಿಯೊಬ್ಬ ಬೊದಕಿಕ್ಕೂ ಒಂದು ಸ್ಫೂರ್ತಿ ಬೇಕಾದೆ. ಅದ್ ಯಾರೋ ಒಬ್ಬ ಆಡ್‌ದಂತ ಮಾತ್‌ಲಿ ಅಡಂಗಿಕಂಡಿದ್ದದೆ. ಇದ್ ಹೌದೂತಾಕೆ ಒಂದ್ ಸಣ್ಣ ಕತೆನ ಓದಿಬಿಡಿ. ಒಬ್ಬ ರಾಜ... ಅವನ ಸೇನೆಲಿ ನೂರಾರ್ ಕುದುರೆಗ, ಆನೆಗ, ಒಂಟೆಗ, ಕಾಲಾಳ್‌ಗ ಎಲ್ಲಾ ಇದ್ದೊ. ರಾಜಂಗೆ ಒಂದ್ ಆನೆನ ಕಂಡರೆ ಬಾರೀ ಕುಸಿ. ಆನೆ ಸನ ಎಂತದೇ ಕೆಲ್‌ಸ ಇರ್‌ಲಿ, ಯುದ್ಧ ಇರ್‌ಲಿ ಅದ್ ಮಾಡಕಾದ ಕೆಲ್‌ಸನ ಮನ್‌ಸಿಟ್ಟ್ ಮಾಡ್‌ತಿತ್ತ್. ಹಿಂಗಿರ್‌ಕನ ಆ ಆನೆಗೆ ವಯಸ್ಸಾಗ್ತಾ ಬಾತ್. ರಾಜ ಆನೆಗೆ ಕೆಲ್‌ಸ ಕೊಡ್‌ದನ ನಿಲ್‌ಸಿಕೆ ಹೇಳ್‌ತ್. ಇದ್‌ರಿಂದ ಆನೆ ದಿನಂದ ದಿನಕೆ ಮಂಕಾಗ್ತಾ ಬಾತ್. ಒಂದ್ ಸರ್ತಿ ನೀರ್ ಕುಡಿಯಕೇತ ಹೋದ ಆನೆ ಕೆಸ್‌ರ್‌ಲಿ ಸಿಕ್ಕಿ ಹಾಕಂತ್. ಫೀಳಿಟ್ಟ್‌ಕಂಡೇ ಇದ್ದ ಆನೆ ಎಂತ ಮಾಡ್‌ರೂ ಹೊರಗೆ ಬಾಕೆ ಆತೇಲೆ. ಕೆಸ್‌ರ್‌ಲಿ ಇನ್ನೂ

ಹೊತ್ ಹೋಗ್‌ತಾನೇ ಇತ್ತ್. ರಾಜಂಗೆ ಇದ್‌ನ ನೋಡಿಕಾಗದೆ ಮರ್‌ಡಿಕೆ ಸುರು ಮಾಡ್‌ದೆ. ಆಗ ಒಬ್ಬ ಮಂತ್ರಿ ಸೈನಿಕರ್‌ನ ಕರ್‌ದ್ ಯುದ್ಧಕ್ಕೆ ಸಿದ್ದ ಆಕೆ ಹೇಳ್‌ತ್. ಕೊಂಬುನ ದೊನಿ ಕೇಳ್‌ದಂಗೇ ಆನೆ ಕೆಮಿಗಳ್‌ನ ನಿಮ್‌ರ್‌ಸಿ ಕಣ್ಣರ್‌ಳ್‌ಸಿ ನೋಡ್‌ತ್. ಮಂತ್ರಿ ಜೋರಾಗಿ ಕರ್‌ತ್ "ಬೇಗ ಎದ್ದ್ ಬಾ, ಈಗ ಯುದ್ಧ ಸುರಾದೆ. ನೀ ಇಲ್ಲದೆ ಹೋದರೆ ನಾವ್ ಸತ್ರುಗಳ್‌ನ ಗೆಲ್ಲಿಕಾಲೆತ. ಇದ್‌ನ ಕೇಳ್‌ದ ಆನೆ ಇದ್ದ ಬದ್ದ ಸಕ್ತಿನೆಲ್ಲಾ ಹಾಕಿ ಮೇಲೆದ್ದ್ ಬಾತ್. ಆಗ ಮಂತ್ರಿ ಹೇಳ್‌ತ್ "ಸರ್‌ದ ಬಲಲಿ ಮಾತ್ರ ಬದ್‌ಕಿಕಾಲೆ ದೊರೆ, ಬದಕಿಕೆ ಒಳಗೆಂದ ಒಂದ್ ಸ್ಫೂರ್ತಿ ಬೇಕಾದೆ. ಅದ್‌ನ ಕೊಡುವಂತ ಸಕ್ತಿ ನಮ್ಮ ಮಾತಿಗುಟ್ಟು. ಪೊರ್ಲನ ಒಂದ್ ಮಾತ್ ಬದ್‌ಕಿಕೆ ಹುರ್ಪು ಕೊಟ್ಟಿದೆ"ತ. ಹೌದು, ಇಂತ ಸಕ್ತಿಂದ ಕೂಡ್‌ದ ಮಾತ್‌ಗಳ್‌ನ ಜೀವ ಬರ್‌ಸಿಕೆ ನಾವ ಉಪಯೋಗಿಸೊಕೇ ಹೊರ್‌ತ್ ಜೀವ ತೆಗಿಯಕಲ್ಲ.

ನಾಯಿ ಮನೆನ ಕಾದರೆ, ನಮ್ಮ ನಾಲ್‌ಗೆ ಕುಲನೇ ಕಾದದೆಗಡ. ನಮ್ಮ ಮಾತ್ ನಮ್ಮ ವ್ಯಕ್ತಿತ್ವದ ಪ್ರತಿಬಿಂಬ. ಮನ್‌ಸ ಮನ್‌ಸನಾಗಿರಕೆ ಬೇಕಾಗಿರ್‌ವಂತ ಅಗತ್ಯದ ಸಂಪತ್ತ್‌ಗಳಲಿ ಮಾತ್‌ಗಾರಿಕೆ ಸನ ಒಂದ್. ಮಾತ್ ಮತ್ತೆ ನೀರ್ ಇವೆರಡೂ ಸುಲ್‌ಬಲಿ ತುಳ್‌ಕುವಂತ ಸ್ವಭಾವದವ್. ಅವಗಳ್‌ನ ಪುನ ಸಂಗ್ರಹಿಸಿಕಾಲೆಂತ ಹೇಳದು ಮನೆಮಾತ್. ಅದ್‌ಕೇ ಗಂಟ್ಲ್‌ಂದ ಜಾರಿಕೆ ಮುಂದೆ ಉಸಾರಾಗಿರೊಕು.

"ನುಡಿ ತೀರ್ಥ ನಡೆ ತೀರ್ಥ

ಸನ್ನುಡೆ ಸನ್ನಡೆ ಸೊಗವದು ತೀರ್ಥ

ಹರಿವ ನೀರೆತ್ತರಾ ತೀರ್ಥವಯ್ಯಾ"ತ ಜಂಗಮರ್ ಕೇಳ್‌ದ್ ಇದೇ ಕಾರಣದಿಂದಾಗಿ.

ಒಂದ್ ಕಾಸೂ ಕರ್ಚು ಮಾಡದೆ ನಾವ್ ಇನ್ನೊಬ್ಬಂಗೆ ಮಾಡಿಕಾಗುವ ಸಾಯತೇಳ್ರೆ ಒಂದ್ ಪೊರ್ಲುನ ಮಾತ್. ಒಂದೇ ಒಂದ್ ಒಳ್ಳೆ ಮಾತ್‌ಂದ ಒಬ್ಬನ ಬದ್‌ಕೇ ಬದ್‌ಲಾದಂತ ಎಷ್ಟೋ ಉದಾರಣೆಗ ನಮ್ಮ ಮುಂದೆ ಒಳೊ. ಸೋತು ಸುಣ್ಣಾಗಿರ್‌ವವನ ಎದ್‌ರ್‌ಗೆ ನಾವಾಡ್‌ವ ಧೈರ್ಯದ ಮಾತ್‌ಂದ ಅವನ ಆತ್ಮಸ್ಥೈರ್ಯ ಹೆಚ್ಚಿದೆ. ಬೇಜಾರ್‌ಲಿ ಕುದ್ದವಂಗೆ ನಾವ್ ಹೇಳ್‌ವ ಸಾಂತ್ವನದ ಮಾತ್‌ಗ ಅವನ ದುಕ್ಕನ ಕಮ್ಮಿ ಮಾಡ್‌ದೆ. ಬೆನ್ನು ತಟ್ಟುವಂತೆ ಆಡ್‌ದ ಮಾತ್ ಒಬ್ಬನ ಸಾಧನೆಗೆ ಸ್ಫೂರ್ತಿಯಾದೆ. ಗಂಡ–ಹೆಣ್ಣ್‌ನ ನಡೂಲಿ ಪ್ರೀತಿಂದ ಕೂಡ್‌ದ ಮಾತ್‌ಕತೆ ಇದ್ದರೆ ಮಾತ್ರ ಅವ್‌ರ ಸಂಸಾರ ನೆಟ್ಟಗಿದ್ದದೆ. ಮಕ್ಕಳಿಗೆ ದೊಡ್ಡವು ಹೇಳ್‌ವ ಬುದ್ಧಿಮಾತ್‌ಗ ಅವರ ಬವಿಸ್ಯನ ರೂಪಿಸಿದೆ. ಲಾಯ್‌ಕದ ಮಾತ್‌ಕತೆಗ ನಡ್‌ಕಂಡಿದ್ದರೆ ಮಾತ್ರ ನೆಂಟಸ್ತನ ಗಟ್ಟಿಯಾಗಿದ್ದದೆ. ಹಂಗ್‌ಸ್ವ,

ಬೊಟ್ಟುವ, ಹೊಟ್ಟೆಕಿಚ್ಚ್‌ನ ಮಾತ್‌ಗ ಒಬ್ಬನ ಕುಸ್‌ದ್ ಕೂರುವಂಗೆ ಮಾಡ್‌ದೆ. ಹಿಂಗೆ ಮಾತ್‌ಂದಾವ ಚಮತ್ಕಾರದ ಅದೆಷ್ಟೋ! ಒಬ್ಬ ಕೈಲಾಗದಿರವವನತ್ರ ಹೋಗಿ ನಾಲ್ಕ್ ಒಳ್ಳೆ ಮಾತಾಡಿ ಬನ್ನಿ. ಅದ್‌ರ ಪರಿಣಾಮ ನೀವ್‌ಗೇ ಗೊತ್ತಾದೆ.

ನಾಲ್‌ಗೆ ಒಳ್ಳೆದಾದರೆ ನಾಡೇ ಒಳ್ಳೆದೂತ ಹೇಳವೆ. ಜನ ಸೇರ್‌ವ ಜಂಬರಗಳ್‌ಲಿ ನಾವಾಡ್‌ವ ಕುಸಿ–ಕುಸಿನ ಲಾಯಕ್‌ದ ತಮಾಸೆ ಮಾತ್‌ಗ ಅಲ್ಲೆಲ್ಲಾ ನಗೆ ತುಂಬ್‌ಸಿ, ಜಂಬರದ ಕಳೆನ ಹೆಚ್ಚ್‌ಸ್‌ದೆ. ನಾವಾಡ್‌ವಂತ ಮಾತ್ ಚಿನ್ನ ತೂಗಿದಂಗಿರೊಕು. ಒಳ್ಳೆ ಮಾತ್‌ಂದ ಹೊಟ್ಟೆ ತುಂಬಿದೇತ ಹೇಳ್‌ದು ಸುಳ್ಳಲ್ಲ. ಗೌಜಿಲಿ ಉಂಬಕೆ ಮಾಡಿ ಇಕ್ಕಿ, ಲಾಯಕ್‌ಲಿ ಮಾತಾಡದವರ ಮನೆಗೆ ಇನ್ನೊಮ್ಮೆ ಹೋಕೆ ಸಾದಾರಣಾಗಿ ಯಾರಿಗೂ ಮನ್‌ಸಾಕಿಲೆ.

ಅದ್‌ಕೇ ಸರ್ವಜ್ಞ ಹೇಳ್ಯೊಳೊ

"ಮಾತಿಂದ ನಗೆನುಡಿಯು
ಮಾತಿಂದ ಕೊಲೆಹಗೆಯು
ಮಾತಿಂದೆ ಸರ್ವರಿಗೆಯುಪಚಾರ
ಲೋಕಕ್ಕೆ ಮಾತೇ ಮಾಣಿಕವು ಸರ್ವಜ್ಞ ॥

ಹಂಗೇನೇ

"ರಸಿಕನಾಡಿದ ಮಾತು ಶಶಿ ಉದಿಸಿ ಬಂದಂತೆ
ರಸಿಕನಲ್ಲದವನ ಬರಿಮಾತು ಕಿವಿಗೆ
ಕೂರ್ದಸಿಯು ಬಡಿದಂತೆ ಸರ್ವಜ್ಞ ॥

ಒಂದ್ ದೀಪಂದ ಇನ್ನೊಂದ್ ದೀಪನ ಬೆಳ್‌ಗುವಂತೆ ಒಂದ್ ಒಳ್ಳೆ ಮಾತ್‌ಗೆ ಒಬ್ಬನ ಬೊದ್ಕುನೇ ಬೆಳ್‌ಗುವಂತ ಸಕ್ತಿ ಉಟ್ಟ್. ಬುಟ್ಟ ಬಾಣ, ಆಡ್‌ದ ಮಾತ್, ಒಡ್‌ದ್ ಹೋದ ಮುತ್ತ್, ಕಳಕಂಡ ಸಮಯ, ಕಳ್‌ದೋದ ನಂಬಿಕೆ ಇವಿಷ್ಟೂ ನಾವ್‌ಗೆ ತಿರ್‌ಗಿ ಸಿಕ್ಕುಲೇತ ಹೇಳ್‌ದು ಅಲ್ಲಗಳಿಯಕಾಗದ ಸತ್ಯ. ಒಂದ್ ಪಟ್ಟೆಲಿ ಹಕ್ಕಿಪುಕ್ಕಗಳ್‌ನ ಇಸಿಕಂಡ್ ಜೋರಾದ ಗಾಳಿಗೆ ಹಿಡ್‌ದರೆ ಹೊಗೆ ಹಾರಿ ಹೋಗಿ ವಾಪಾಸ್ ತಾಕಾಲೆನೋ ಹಂಗೆನೇ ನಾವ್ ಒಮ್ಮೆ ಆಡ್‌ದ ಮಾತ್‌ಗಳ್‌ನ ವಾಪಾಸ್ ತಾಕಾಲೆ. ಮಾತ್‌ಂದಾದ ಗಾಯ ಮಾಸಿ ಹೋದುಲೆ.

ಅದ್‌ಕೇ ಬಸವಣ್ಣ ಹೇಳ್ಯೊಳೊ,

"ನುಡಿದರೆ ಮುತ್ತಿನ ಹಾರದಂತಿರಬೇಕು
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು
ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು
ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು ॥"

ನಾಲ್‌ಗೆನ ಉಪಯೋಗ್‌ಸಿ ಮಾತಾಡಿಕೆ ಸುರೂಲಿ ನಾವ್‌ಗೆ ಮೂರ್ ವರ್ಸ ಬೇಕಾದರೆ, ಅದೇ ನಾಲ್‌ಗೆಲಿ ಹೆಂಗೆ ಮಾತಾಡೊಕೂತ ಕಲಿಯಕೆ ಇಡೀ ಜನ್ಮ ಸಾಕಾಲೆ. ಅವ್ವ ಮಾತ್ ಕಲ್‌ಸಿರೆ ಅಪ್ಪ ವ್ಯವಹಾರ ಕಲ್‌ಸಿದೆಗಡ. ಯಾವ್‌ದೇ ವ್ಯವಹಾರಲಿ ಮಾತ್ ಅತ್ಯಂತ ಅವಸ್ಯದೆ. ಹಂಗಾಗಿ "ಅಪ್ಪನ ವ್ಯವಹಾರಲಿ ಮಾತ್ ಅತ್ಯಂತ ಅವಸ್ಯದೆ. ಹಂಗಾಗಿ ಅಪ್ಪನ ವ್ಯವಹಾರಕೆ ಅವ್ವನ ಮಾತ್ ಸೇರ್‌ರೆ ಮಾತ್ರ ಅದ್ ಯಸಸ್ ಕಂಡದೆ, ಬೊದ್ಕು ಪೊರ್ಲಾದೆ". ಬೊದ್ಕುಲಿ ಬೇಕಾದ ಹೊಂದಾಣಿಕೆನ ತಿಳ್‌ಸುವ ಈ ಪೊರ್ಲುನ ಮಾತ್‌ಲಿ ಅದೆಷ್ಟು ಗುಟ್ಟ್ ಅಕಾಂಗುಟ್ಟ್!

ಯಾಗ ಮಾತ್‌ಲಿ ಸತ್ಯ ಇದ್ದದೆನೋ, ಆಗ ಆ ಮಾತ್ ಮಂತ್ರದ ರೂಪ ಪಡ್‌ದದೆ. ಅದ್‌ರ್‌ಂದಾಗೇ ಋಷಿ–ಮುನಿಗ, ಸಾದು–ಸಂತಂಗ, ಸಶಕಾಂಗ ಆಡ್‌ದ ಮಾತೆಲ್ಲಾ ಮಂತ್ರಗಳಾದೊ. ಭಕ್ತ ಕನಕದಾಸ ಬರೀ ಮಾತ್‌ಂದ ಶ್ರೀಕೃಷ್ಣ ಪರಮಾತ್ಮನ ಒಲ್‌ಸಿಕಣ್‌ತ್. ಕುದ್ದಲ್ಲಿ, ನಿತ್ತಲ್ಲಿ, ನಡ್‌ದಲ್ಲಿ, ನೋಡ್‌ದಲ್ಲಿ ಅವನ ಭಕ್ತಿಮಾತ್‌ನ ಪದ್ಯರೂಪಲಿ ಹೇಳಿ ಭಗವಂತ ಅವನತ್ತ ತಿರ್‌ಗ್‌ವವಂತೆ ಮಾಡ್‌ತ್‌ಗಡ. ನಾವ್ ಆಡ್‌ವಂತ ಮಾತೆಗೆಲ್ಲವೂ ಹೂಗಳಂತೆ ಇದ್ದ್ ಪರಮಾತ್ಮಂಗೆ ಮುಡ್‌ಸುವ ರೀತಿಲಿರೋಕು. ನಮ್ಮ ನಾಲ್‌ಗೆ ಮೇಲೆ ನಾವ್‌ಗೆ ಹತೋಟಿ ಇರೊಕು.

ಡಾ. ಪ್ರಭುಶಂಕರ್ ಹೇಳ್ಯೊಳು – ಒಳ್ಳೆಯವು ಒಳ್ಳೆಯದರ ಬಗ್ಗೆ ಎಲ್ಲವ್‌ಕೊ ಕೇಳ್‌ವಂಗೆ ಮಾತಾಡಿಕಂಡೇ ಇರೊಕೂತ. ಹಂಗೆ ನಾವ್ ಪೊರ್ಲುನ ಮಾತ್‌ಗಳ್‌ನ ಆಡ್‌ತಾ ಬೊದ್ಕು ಪೊರ್ಲಾಗಿರ್‌ವಂಗೆ ಬೊದ್ಕೊನೊ.

---

**ಕೊಟ್ಟಕೇರಿಯನ ಲೀಲಾ ದಯಾನಂದ**
ಉಪ ಮಂಡಲ ಅಧಿಕಾರಿ, ಬಿ.ಎಸ್.ಎನ್.ಎಲ್., ಮಡಿಕೇರಿ
9449858586




# ದುಬಾಯಿ ಹೈದನ ನೆಟ್‌ಕಡ್ಡಿ ಶಾಲೆ




● ಅಕ್ಷತಾರಾಜ್ ಪೆರ್ಲ

ಮೊನ್ನೆ ಮೊನ್ನೆಮುಟ್ಟ ಊರ್‌ಬಿಟ್ಟ ಹೈದ ಆಚ್ಮನೆ ಶೇಖರ ಈ ಕೊರೋನಾ ದಿಸೆಂದ ದುಬೈಂದ ಈ ಬೈಲ್‌ಲಿ ಕುದ್ರೋ ಹೊತ್‌ಗೆ ಶಾರದಕ್ಕಂಗೆ ಮಾತ್ರ ಗಡಿಬಿಡಿ. ಹೈದ ದುಬೈಗೆ ಹೋಗಿ ಹತ್ತ್‌ವರ್ಷ ಕಳ್ದ್ ಮತ್ತೆ ತಿರ್‌ಗಿ ಬಂದುಟು. ಎಂತಾ ಗೌಜಿ... ಅದೆಂತಾ ಗೌಜಿ! ಎಷ್ಟ್ ದಿನಕ್ಕೆ? ಒಂದ್ವಾರ. ಮತ್ತೆ ಶಾರದಕ್ಕಂಗೆ ಕೋಪ ಬಾಕೆ ಸುರಾತ್. ಹೈದ ಮನೇಲಿ ಇಲ್ಲೇತ್ತ ಪರಂಚಿಕಂಡ್ ಇದ್ದ ಶಾರದಕ್ಕ ಈಗ ಊರ್‌ಗೆ ಬಂದದೇ ಅಡ್ಗೆ ಮನೇಲಿ ಬಡ್ಸುಂಗೆ ಆತ್ ಹೇಳಿ ತಿಳ್ಕಂಡದ್ ಸುಳ್ಳಲ್ಲ. ಇನ್ನ್ ಆ ಶೇಖ್ರನೋ! ಬೆಳ್ಗೆದ್ರೆ ಮೊಬೈಲ್ ಹಿಡ್ಕಂಡ್ ಅದೆಂತದ್ದೋ ಮೊಬೈಲಿಲಿ ನೆಟ್ಟ್‌ಕಡ್ಡಿ ಸರಿಯಿಲ್ಲೆತ ಹೇಳಿಕಂಡ್ ಗುಡ್ಡೆ ಹತ್ತೋ ಹೊತ್‌ಗೆ ಶಾರದಕ್ಕ ಇನ್ನೂ ಎದ್ರಿಕಿಲ್ಲೆ. "ಯೇ ಶೇಖ್ರ ಹಿಂಗೆ ಕಡ್ಡಿ ಸಿಕ್ಕುಲೇತ ನೆಪ ಹೇಳಿಕಂಡ್ ಇರ್ದು ಬಿಟ್ಟು ದನಕ್ಕೆ ಹನ್‌ಯ ಹುಲ್ಲು ತಂದ್ ಹಾಕ್ ಮಾರಾಯ" ಶಾರದಕ್ಕ ಹಿಂಗೆ ಹೇಳಿರೆ "ಅದೆಲ್ಲ ನಂಗೆಲ್ಲಿ ಗೊತ್ತುಟು?ಆನ್ಲೈನ್‌ಲಿ ಬುಕ್ ಮಾಡ್‌ರೆ ಹೆಂಗೆ?" ಶೇಖ್ರನ ಮಾತ್ ಕೇಳಿ ರಪ್ಪತೇಳಿ ಕೋಪ ಬಾತ್ ಶಾರದಕ್ಕಂಗೆ. ಹಂಗೆ ಮೊನ್ನೆ ಹೈದ ಗೂಗಲ್‌ಮೀಟ್‌ತೇಳಿಕಂಡ್ ಅಲ್ಲೇ ಬಟ್ಟೆ ಒಗ್ಯೋ ಕಲ್ಲಲಿ ಕುದ್ಕಂಡ್ ಇತ್ತ್. ಅದ್ಯಾರೋ ಫೋನ್ ಮಾಡ್ದೋತ ಹೇಳಿ ಲ್ಯಾಪ್‌ಟಾಪ್‌ನ ಅಲ್ಲೇ ಬುಟ್ಟು ಹೋಗಿತ್ತ್. ತಿರ್ಗಿ ಬಂದ್ ನೋಡ್ಕಣ ಶಾರದಕ್ಕ ಆ ಲ್ಯಾಪ್‌ಟಾಪ್‌ನ ವರ್ಸಿ ಕೆಳಗೆ ಹಾಕ್‌ತ್ತ್. ಎಂತದ್ರಲಿ ಒರ್ಸಿದ್‌ತೇಳಿ ಕೇಳಿರೆ "ಶೇಖ್ರ ಆ ಪೆಟ್ಗೆ ಮೇಲೆ ಕಾಕೆ ಪಿಟ್ಟೆ ಹಾಕ್ತ್, ನಾ ಒರ್ಸಿದ್ದ್ ಮಾರಾಯ" ಅಂತೇಳ್ತ್. ಅಮ್ಮನ ಮಾತ್ ಕೇಳಿ

ಅಂವ ನೋಡ್ತ್ ಲ್ಯಾಪ್‌ಟಾಪ್‌ಗೆ ಲಾಯ್ಕ ನೀರ್ ಹಾಕಿ ಮೀಸಿ ಒಣ್‌ಗ್ಗಿ ಇಟ್ಟೊಳೆ. ಅದ್ ತೊಳ್ಯೋ ಸೊತ್ತಲ್ಲತ ಅದ್ಕುನೂ ಗೊತ್ತಿಲ್ಲೆ, ಹಂಗೆ ಎಲ್ಲೆಲ್ಲೋ ಬುಟ್ಟು ಹೋಕಾಗ್ತ್‌ತಾ ಹೇಳಿ ಇವಂಗೂ ಗೊತ್ಲೆ. ಅದ್ಕೆ ಅಲ ಹೇಳುದು ಮಂಗನ ಕೈಲಿ ಮಾಣಿಕ್ಯತೇಳಿ!

ಈ ಬೊದ್ಕೆ ಹಿಂಗೆ ಅಲ? ಎಲ್ಲೋ ಇದ್ದವ್ರನ್ನ ಇನ್ನೆಲ್ಲೋ ಸೇರ್ಸಿದೆ. ಬೇಕ್ ಹೇಳ್ದಲ್ಲ ದೂರ ಅದೆ ಬೇಡ ಹೇಳ್ದಲ್ಲ ಹತ್ರ ಸೇರ್ದೆ. ಇಲ್ದಿದ್ರೆ ಆ ಶೇಖ್ರಂಗೆ ಎಂತ ಕಮ್ಮಿಯಿತ್ತ್ ದುಬೈಲಿ? ಒಳ್ಳೆ ಕೆಲ್ಸ ಅದ್ಕೆ ತಕ್ಕ ಸಂಬ್ಳಾನೂ. ಆದ್ರೆಂತ ಮಾಡ್ದ್? ಈ ಕಣ್ಗೆ ಕಾಣ್ದ ವೈರಸ್ ಕಾಟ ದೊಡ್ಡ್ ಹುದ್ದೇನೂ ಬಿಡ್ದೆ ಮತ್ತೆ ಹುಟ್ಟಿದ ಮಣ್ಣ್‌ಗೆ ಕಳ್ಸಿ ಕೊಟ್ಟಿತ್. ಪಾಪ! ಬಂದ ಸುರೂಲಿ ಶೇಖ್ರನ ಕಣ್ಣಿಲಿ ನೀರ್ ನೋಡ್ದ್ರೆ ಬೇಜಾರಾದ್ರೂ ಇರ್ಲಿ ಹಿಂಗಾದ್ರೂ ಹುಟ್ಟಿದ ಮಣ್ಣ್‌ಗೆ ಹೈದ್ರು ಬಪ್ಪದೇ ಖುಷಿ ಹೇಳುದೂ ನಿಜ. ಆದರೆ ಸೂಟ್ಬೂಟು ಹಾಕ್ದ ಹೈದ ಮುಟ್ಟಳೆ ಮಂಡೆಗೆ ಏರ್ಸೋರ್ದುಟ್ಟ? ಹಾಕ್ಕಂಡ್ರೂ ಹಸಿ ಸೊಪ್ಪ್ ಹಟ್ಟಿಗ್ ತರೋದುಟ್ಟ? ಅದೆಂತಿದ್ರೂ ತಲೆಗ್ ಹಾಕ್ಕಂಡ್ ಮೊಬೈಲ್ ಹಿಡ್ದ್ ಸೆಲ್ಫೀ ಹೇಳ್ತ ಪಟಕ್ಕೆ ಮುಖ ಕೊಡ್ಕಷ್ಟೇ ಲಾಯಕ್. ಮೊನ್ನೆ ಆ ಗೌರಿ ಕರುನ ಹಿಡ್ಕಂಡ್ "ಮೈ ಲವ್" ಹೇಳಿ ಹಾಕ್ದದು ಮಂಜ ತೋರ್ಸಿತ್ತ್ ಮೊಬೈಲಿಲಿ. ಆದ್ರೆ ಹಂಗೆ ಹಿಡ್ಕಂಡಿದ್ದೇ ಗೌರಿ ಜಾಡ್ಸಿ ಒದ್ದಿದ್ ಹಾಕ್ಲಿಲ್ಲ. ಪಾಪ ಹಾಲ್ ಕುಡ್ಯೋ ಬಾಬೆನ ಹಂಗೆ ಎತ್ತಿ ಮೈ ಲವ್ ಹೇಳ್ತ ಪಟ ತೆಗ್‌ದ್ರೆ ದನ ಬಿಟ್ಟಿತಾ? ಅದ್ಕೂ ಜೀವ ಇದ್ದ್. ಹಾಲ್ ಕರ್ಯಕೆ ಬಂದ ಶಾರದಕ್ಕ ಮಂಜನ ಅವಸ್ಥೆ ನೋಡಿ ಬೆಪ್ಪಿಲಿ ಎಬ್ಸಿದ್‌ತೇಳ್ದ ವಿಸ್ಯ ತಿಳ್ಸಿದ್ ಚೋಮ. 'ಪಟಲ್ಲಿ ಕತ್ತೆನೂ ಕುದ್ರೆ ಆಗುದುಟ್ಟು' ಆದ್ರೆ ಬೊದ್ಕ್‌ಲಿ ಕುದ್ರೆ ಆಗಿದ್ದದ್ ಕತ್ತೆ ಹಂಗೆ ಆಡ್ತಾ ಉಟ್ಟು ಮಾತ್‌ತೇಳ್ದು ಇದ್ಕೆನೆ. ನೆಟ್‌ಪಟ್‌ತ ಗುಡ್ಡೆ ಬೈಲ್ ತಿರ್ಗುವ ಈ ಹೈದನ ಕಂಡ್ ತಲೆ ಕೆಟ್ಟಿರೊಕುತ ಹೇಳ್ತ ಸಂಸಯ ಇದ್ದದ್ ಬೈಲಿನ ಚೋಮಂಗೆ ಮಾತ್ರ, ಈ ಅನ್ಮಾನ ಬೈಲಿಡೀ ತಲ್ಪಿಕೆ ಹೆಚ್ ದಿನ ಬೇಕಾಗದೆ ಹೋತು ಆ ಮರ ಹತ್ತುವ ಪ್ರಸಂಗಲಿ.

ಅದೊಂದ್ ದಿನ ಬೊಳ್ಪಿಗೆ ಎದ್ದ್ ಶಾರದಕ್ಕ ಮನೆ ಕಡೆ ಬಾತ್. "ಎಂತ ಶಾರದ ಬೊಳ್ಪುಗೆನೆ ಮನೆ ಕಡೆ?" ನಮ್ಮೋರು ಕೇಳ್ದಕೆ "ಎಂತ ಇಲ್ಲೆ ರಾಮಣ್ಣ ಸೇಮ್ಗೆ ಮಾಡಿದ್ದೆ ತಕಂಡ್ ಬಂದೆ" ಹೇಳಿ ಸೇಮ್ಗೆ ಬುತ್ತಿ ಒಳ್ಗೆ ಇಡ್ಕೆ ಹೋತ್. ಇಡೋ ಹೊತ್ಗೆ "ಎಂಥ ಮಾಡ್ತವ್ವ ನಿನ್ ಮಂಜ?" ಮತ್ತೆ ಕೇಳೋ ಹೊತ್ಗೆ "ಎಂತ ಮಾಡುದು ಕರ್ಮ! ಅದೆಂತದೋ ಶಾಲೆಗೆ

ಸೇರ್ಕಂಡುಂಟುಗಡ" ಶಾರದಕ್ಕನ ಮಾತಿಗೆ "ಶಾಲೆನ! ಇದೆಂತದೋ ಈ ಶಾಲೆ? ಶಾಲೆ ಮುಚ್ಚಿರೋ ಹೊತ್ನಲ್ಲಿ ಅದ್ಯಾವ ಶಾಲೆಗೆ ಹೊರ್ಟುಕು ಇವ?" ಅಂತ ಹೇಳಿ ಇಕ ಕೆಮಿ ನೆಟ್ಟಗಾತು. "ಯೇ ಆ ಶಾಲೆ ಅಲ್ಲನೆ ಇದ್ ಕಂಪ್ಯೂಟರ್ ಒಳ್ಗಿರೋ ಶಾಲೆ" ಶಾರದಕ್ಕ ಮಾತ್ ಮುಗ್ಸೋ ಮುಂಚೆನೆ "ಅಮ್ಮಾ ಅದ್ ಓನ್‌ಲೈನ್ ಕ್ಲಾಸ್"ತ ಮಂಜ ಹೇಳ್ತ್. "ನಿನ್ನ ಮಂಜಂಗೆ ಈಗೆಂತದೇ ಕ್ಲಾಸ್?" ಇವ್ರ ಮಾತಿಗೆ "ಅದೆಲ್ಲ ನಂಗೊತ್ತಿದ್ರೆ ನಾ ಹಟ್ಟಿಲಿ ಇರ್ತಿದ್ನಾ? ಒಂದ್ ತಿಂಗಾತ್ ಕ್ಲಾಸ್ ಸುರಾಗಿ, ಗುಡ್ಡೆ-ಹಾಡಿ ಬೈಲ್‌ತ ತಿರ್ಗಿಕಂಡೇ ಉಟ್ಟು ಈ ಮಾಣಿ, ಅದೆಂತದೋ ನೆಟ್ಟಿಲ್ಲೆಗಡ ಪಾಪ" ಮೋರೆ ತಿರ್ಗಿಸಿಕಂತ್ ಶಾರದಕ್ಕ. "ಅಲೆಲೇ ಈಗ ಶೇಖ್ರಂಗೆ ಎಂಥ ಕ್ಲಾಸ್? ಅನ್ಮಾನ ಮೂಡ್ಸಿ ಹೋತ್ ಇದೊಂದ್ ಹೇಳಿಕಂಡ್ ನಾ ಒಳ್ಗೆ ಹೋಗೋಷ್ಟ್ರಲಿ "ಅಮ್ಮ ನಾ ನೋಡಿಕಂಡ್ ಬನ್ನೇ?" ಅಂತ ಮಂಜ ಹೇಳ್ತ್. "ನೋಡ್ದೆಂತರ? ಹೈದ ಬಾರದೆ ಎಲ್ಲಿ ಹೋದೆ? ಬಂದ ಮೇಲೆ ಕೇಳ್ದರೆ ಆತು ಬುಡು" ಇವು ಎದ್ದ್ ಹೋದವೆ ನಮ್ಮ ತಲೆಲೊಂದು ಹುಳ ಅಲ್ಲ ಕೇರೆಹಾವ್ ಬುಟ್ಟು ಹೋದ್ದೇ ಸೈ ಶಾರದಕ್ಕ. "ಕಲಿಯೋ ಸಮೆಲಿ ಕಲೀದೆ ಅದೆಂತದೋ ಡಿಪ್ಲೊಮಾತ ಅರ್ಧಕ್ಕೆ ನಿಲ್ಸಿ ದುಬಾಯಿ ಇಮಾನ್ ಹತ್ತ್‌ದ ಹೇಳಿ ನೀ ಹೇಳ್ಕಂಡಿದ್ದಲ ಅದ್ನ ನಾನೂ ಕೇಳ್ದವ ಅಮ್ಮ, ಹಂಗಿರ್ಕನ ಈ ಶೇಖ್ರ ಭಾವಂಗೆ ಈಗೆಂತ ಕ್ಲಾಸಿಗೆ ಸೇರ್ದು?" ಈ ಪ್ರಶ್ನೆ ಮಂಜಂದಷ್ಟೇ ಅಲ್ಲ ನನ್ದ್‌ಸಾ ಆಗಿತ್ತ್. "ಆಗ ಕಲೀದ ಆಸಾಮಿಗೆ ಈಗೆಂತ ಓದು?" ಹಿಂಗೆ ಯೋಚ್ನೆ ಮಾಡ್ತಾ ಇರ್ಕನ ಶಾರದಕ್ಕ ಕೊಟ್ಟ ಸೇಮ್ಗೆ ಬುತ್ತಿ ತೆಗಂಡ್ ಒಳ್ಗೆ ಹೋದೆ ನಾ. "ಆ ಹೈದಂಗೆ ತಲೆ ಕೆಟ್ಟೀತ್" ಇದೆಲ್ಲ ಕೇಳಿ ಉಸ್ರು ಬಿಟ್ಟ ಚೋಮನ ಮಾತ್ಗೆ ಕೇಳ್ರೂ ಕೇಳ್ದಂಗೆ ಇದ್ದ್ ಇದರ್ಲಿ ಏನೋ ಉಟ್ಟೂತ ತಿಳ್ಕಂಡಿದ್ದೆ ನಾ ಮನ್ಸ್ ಒಳಗೆ. ಶಾಲೆಗ್ ಹೋಕ್ಕಂಡ್ ಕಲಿತಿದ್ದ ಮಕ್ಕೆಲ್ಲ ಈಗ ಮೊಬೈಲ್ ಹಿಡ್ಯಕೆ ಒಳ್ಳೆ ಸಮೆ. ಸುರುಸುರೂಗೆಲ್ಲ ಮೊಬೈಲ್ ಹಿಡ್ಕಂಡ್ರೆ ನನ್ನ ಮಗ ಓದುದಿಲ್ಲೆ ಅಂತ ಅಪ್ಪ ಅಯ್ಯನೂ ಬೊಬ್ಬೆ ಹಾಕಂಡಿತ್ತ್. ಈಗ ಅವ್ವೇ "ಮಗಾ ತೆಕ್ಕಾ ಓದು"ತೇಳಿಕಂಡ್ ಕೊಡ್ತಾ ಉಟ್ಟು. ಅದ್‌ಬಿಡಿ ಆ ತೋಡ್ಮನೆ ಗಿರಿಜಾನ ಮಗ್ಳ್ ಮೊಬೈಲ್ ತೆಕಂಡ್ ಓದೊಡ್ಬಿಟ್ಟ್ ಅಯ್ಯ ನಡೆಸ್ತಿದ್ದ ಚೀಟಿ ವ್ಯವ್‌ಹಾರ ಹುಡ್ಕಿ ಅಪ್ಪಯ್ಯಂಗೆ ಹೇಳ್ತಾಂಗೆ ಆದ್ದ್ ಮತ್ತೆ ಆ ಶಂಕ್ರನ ಮಂಜಂಗೆ ಓದ್ಲಿಕೆ ಸ್ಮಾರ್ಟ್‌ಫೋನ್ ಇಲ್ಲತೇಳಿ ಬೇಜಾರಿಲಿ ಬಾವಿಗೆ ಹಾರಿಕೆ ನೋಡ್ದುದ್ದತ ಗೊತ್ತುಟು. ಇದೆಲ್ಲ ಆದ್ದ್ ಈ ಆನ್‌ಲೈನ್ ದಿಸೆಂದ.

ಬೊದ್ಕೇ ಹೀಂಗೆ ಅಲ ಹಾಸಿಕಣಿಕೆ ಇದ್ದವಂಗೆ ಹೊದ್ದ್‌ಕಣಿಕೆ ಇರ್ದಿಲೆ. ಹೊದ್ಕಂಡವಂಗೆ ಹಾಸಿಕಣಿಕೆ ಇರ್ಕಿಲ್ಲೆ. ಹಾಸ್ಗೆ ಇದ್ದಷ್ಟ್ ನಾವ್ ಕಾಲ್ ಚಾಚೊಕು ಅದು ಬುಟ್ಟು ಹಾಸ್ಗೆನೆ ಇಲ್ಲತೇಳ್ರೆ? ನೆಲ ಬಿಟ್ಟ್ ನಿಲ್ಲೊದು ಹೆಂಗೆ? ಈಗ ಈ ಶೇಖ್ರುಂಗೆ ಎಲ್ಲಾ ಇದ್ದ್ ನೆಟ್ವರ್ಕ್ ಇಲ್ದೆ ತಾಪತ್ರಯ ಆಗ್ತಾ ಉಟ್ಟು.

ದಿನ ಮೂರ್ ಕಳ್ತ್. ಒಂದ್ ದಿನ ಹಿಂಬೊತ್ತು ಈ ಶೇಖ್ರ ಓಡಿಕಂಡ್ ಬಾತ್ "ಯೇ ಮಾಮ ಒಂದೊಳ್ಳೆ ತೆಂಗಿನಮರ ತೋರ್ಸಿ" ಅಂತ ಹೇಳ್ದಂವೆ ಇವು ಕಕ್ಕಾಬಿಕ್ಕಿ. "ಯೇ ಈಗೆಂತಕೆ ಮೂರ್ಸಂದಿ ಹೊತ್ಗೆ ನಿಂಗೆ ತೆಂಗಿನಮರ?" ಇವ್ರ ಮಾತ್ಗೆ "ನೀ ತೋರ್ಸಾ ಮಾಮ" ಅಂತ ದುಂಬಾಲು ಬಿದ್ದತ್ ಹೈದ. "ಇದೆಂತದಾ ಶೇಖ್ರ ನೀ ಮಕ್ಕಾಂಗೆ?" ಮತ್ತೆ ನಾ ಕೇಳೋ ಹೊತ್ಗೆ "ಅತ್ತೆ ನಂಗೀಗ ಮರ ಹತ್ಬೇಕು" ಶೇಖರನ ಮಾತ್ ಕೇಳ್ದವ್ಕೆ ಘಳ್ಳನೆ ನಗೆ ಬಾತ್. "ಇದೆಂತ ಹುಚ್ಚಾಟ?ಕತ್ಲೆ ಹೊತ್ಗೆ ಮರ ಹತ್ತುವೆನ! ನೀನೆಂತ ಕುರೆನಾ?" ನಾ ಕೇಳ್ದೆ. "ಕುರೆನೋ ಗಿರೆನೋ ಗೊತ್ಲೆ, ಈಗ ಪ್ರಾಕ್ಟಿಕಲ್ ಕ್ಲಾಸ್ ಉಟ್ಟು, ನಾ ಹತ್ತೊಕು ಹೇಳ್ರೆ ಹತ್ತೊಕು" ಸಣ್ಣ ಮಕ್ಕೊ ಹಠ ಮಾಡ್ವ ಹಂಗೆ ರಚ್ಚೆ ಹಿಡ್ದ್ ಕುದ್ದತ್. "ಈಗೆಂತದ ಭಾವ ಪ್ರಾಕ್ಟಿಕಲ್ ನಿಂದ್?" ನನ್ ಮಂಜನಿಗ್ ಚೋದ್ಯ! "ನಿಂಗೆ ಗೊತ್ಲೆ ನಾ ಮರ ಹತ್ತಕ್ಕೆ ಕಲ್ಯೋ ಕ್ಲಾಸ್‌ಗೆ ಸೇರ್ಕಂಡ್ ಒಂದು ತಿಂಗಾತ್" "ಮರ ಹತ್ತುದ ಭಾವ! ನಿಂಗೆಂತ ಈ ಮರ ಹತ್ತೋ ಆಸೆ ಬಾತೋ?" ಮಂಜನ ಮಾತಿಗೆ "ಎಂತದ ಆಸೆ? ನಮ್ಮ ಕೆಲ್ಸ ನಾವ್ ಮಾಡೊಕುಂತ ಹೇಳ್ರೆ ನಾವೇ ಕಲ್ತ್ ಹತ್ತೊಕು, ಹೆಂಗೂ ಊರ್ಲಿ ಒಳೆ ಮರ ಹತ್ತಿಕೆ ಕಲ್ತರೆ ಆ ಹಣನ ನಾವ್ ಉಳ್ಸೋಕಲ" ಶೇಖ್ರನ ಮಾತ್ ಕೇಳ್ದಂಗೆ ನೆಗೆ ಬಾತ್ ಆದ್ರೂ ತಡ್ಕಂಡ್ "ಎಂತದಾ ಶೇಖ್ರ ಕೈ ಕಾಲ್ ಬಡ್ಕಟ್ಟೋ ಹೊತ್ಗೆ ಮರ ಹತ್ತುಕೆ.....ಅದೂ ಓನ್‌ಲೈನ್ ಟ್ರೇನಿಂಗು!" ನನ್ನ ಮಾತಿಗೆ "ಹ್ಞೂಂ ಅತ್ತೆ......ಎರಡು ಸಾವ್ರಕ್ಕೆ ಒಂದ್ ತಿಂಗಲಿ ಮರ ಹತ್ತಿಕೆ ಕಲ್ಸುವೆಗಡ, 20 ದಿನ ಥಿಯರಿ 10 ದಿನ ಪ್ರಾಕ್ಟಿಕಲ್" ಅವ್ನ ಮಾತ್‌ಗೆ "ನಿಂದೆಷ್ಟ್ ದಿನ ಆತ್!" ಇವ್ರ್ ಕೇಳ್ದಷ್ಟೇ "ನನ್ದ್ 25 ದಿನ ಆತ್"ತೇಳಿ ಉತ್ತರ ಕೊಟ್ಟತ್. "ಹಂಗೆತೇಳ್ರೆ ಎಷ್ಟ್ ಬಂದದೆ ನಿಂಗೆ ಮರ ಹತ್ತ್‌ಕೆ ತೋರ್ಸಿ" ಇವ್ರ ಮಾತ್ಗೆ "ಥಿಯರಿಲಿ ಒಳ್ಳೆ ಮಾರ್ಕ್ಸ್ ಬಂದುಟು ಆದ್ರೆ ಪ್ರಾಕ್ಟಿಕಲ್ ಪಾಸಾದು ಕಷ್ಟ ಮಾಮ" ಹೇಳಿ ಹ್ಯಾಪೆಮೋರೆ ಹಾಕಿತ್. "ಯಾಕೆ ಭಾವ?"ತ ಕೇಳ್ದಿಕೆ "ಹತ್ತಿಕೆ ಸರಿಯಾದ ಮರ ಸಿಕ್ಕಿತ್ಲೆ" ಶೇಖ್ರನ ಮಾತಿಗೆ "ಹೇಂಗಿರೋಕು

ಮರ?" ಮಂಜ ಕೇಳ್ದನೆ ಅಂವ ಆನ್‌ಲೈನ್ ಕ್ಲಾಸ್‌ಲಿ ತೋರ್ಸಿದ ಮರ ತೋರ್ಸಿತ್ತ್. "ಇದೆಂತ ಮರ?" ಇವು ಪಕ್ಕನೆ ನೆಗಾಡಿಕೊಂಡು ಇರ್ಕನ ನಾ ಮೋರೆ ತಿರ್ಗಿಸಿಕಂಡೆ, ನಂಗೂ ನಗು ಬಾತ್. ಅಡ್ಡಕ್ಕೆ ಹಾಕ್ದ ಉದ್ದುದ್ದ ಮರ! "ಇದರಲ್ಲೇ  ಸುರೂಕೆ ಅಭ್ಯಾಸ, ಅಕೇರಿಗೆ ಉದ್ದ ಮರ" ಅವ್ನ ಮಾತಿಗೆ ಹಿಡ್ದ್ ನಾಕು ಬಾರ್ಸೊಕುತೇಳುವಷ್ಟು  ಕೋಪ ಬಂದರೂ "ಅಂತಾ ಮರ ಸಿಕ್ಕಿರೆ ಹೇಳ್ನೆ" ಅಂತ ಹೇಳಿ ಅವ್ನ ಕಳ್ಸಿದೊ.

ಹ್ಞ! ಶೇಖ್ರ ಮರ ಹತ್ದ ಪ್ರಸಂಗ ಇದ್. ಒಟ್ಟರೆ ಈ ಆನ್‌ಲೈನ್ ಕ್ಲಾಸ್ ಹೆಂಗೆ ಹೇಳ್ರೆ ಅಲ್ಲಿ ಹೇಳ್ದೊಂದು ಮಾಡ್ದೊಂದು, ಈ ಶೇಖ್ರನಂತವ್ಕೆ ಅರ್ಥ ಮಾಡ್ಸೊಕುತೇಳ್ರೆ ಆಕೆ ಇಲ್ಲೆ.  ಬಿದ್ದ ಮರಲಿ ಮರ ಹತ್ತಿಕೆ ಹೇಳಿಕೊಡೋವು ಒಂದ್ ಕಡೆ ಆದ್ರೆ ಹತ್ತೊಕೆ ಮರ ಬಿದ್ದೇ ಬೀಳಕುಂತೇಳವು ಒಂದ್ಕಡೆ. ಇದ್ ಶೇಖ್ರನ ಕತೆ ಅಷ್ಟೇ ಅಲ್ಲ. ನಮ್ಮ ಸುತ್ತಮುತ್ತನುಸಾ ಹಿಂಗೆ ಬಹಳಸ್ಟ್ ಜನ ಒಳೊ. ಈ ಆನ್‌ಲೈನ್ ಕ್ಲಾಸ್ ಇದ್ದದೆಲ್ಲ ಅದೊಂತರಾ ಮಯನ ಅರಮನೆ ಇದ್ದಂಗೆ. ನೆಟ್‌ವರ್ಕ್ ಸರಿ ಇದ್ರೆ ಸರ್ಯಾಗಿ ಕೇಳ್ಸುದು. ಒಂದ್ವೇಳೆ ನೆಟ್‌ವರ್ಕ್ ಕೈಕೊಟ್ರೆ ಮುಸುಂಟ್ ಒಂದ್ ಕಡೆ ಸರ್ರ ಇನ್ನೊಂದ್ ಕಡೆ ಇದ್ದದೆ. ಇವೆಲ್ಲ ಸರಿ ಇದ್ದು ಆಡಿಯೋ ವೀಡಿಯೋ ಕೇಳ್ದೆ ಮ್ಯೂಟ್ ಮಾಡ್ರೆ ಅದ್ ಇನ್ನೊಂದ್ ಗಮ್ಮತ್ತ್. ಮೊನ್ನೆ ನಮ್ಮ ಹೈದನ ಆನ್‌ಲೈನ್ ಕ್ಲಾಸಿಲಿ ಟೀಚರ್ "ಸೋಮ್ವಾರ ಎಕ್ಸಾಂ ಪೇಪರ್ ಕೊಡೀಕೆ ಸ್ಕೂಲ್‌ಗೆ ಬರೋಕು" ಅಂತೇಳ್ರೆ ಅದ್ಯಾರೋ ಪೇರೆಂಟ್ "ಸಿಲ್ಕ್ ಸೀರೆನಾ ಇಲ್ಲ ಕಾಟನ್ ಸೀರೆನಾ?"ತ ಕೇಳ್ಕನ ನಗೆ ಬಾತ್‌ಗಡ. ಮತ್ತೆ ನೋಡ್ರೆ ಅವು ಕೇಳ್ದ್ ಅಲ್ಲಿ ಅವ್ಳ ದೋಸ್ತಿ ಹತ್ರ.  ಒಟ್ಟರೆ ಆನ್‌ಲೈನ್ ಕ್ಲಾಸ್‌ಲಿ ಹಾಳೂ ಉಟ್ಟು, ಒಳ್ಳೆದೂ ಉಟ್ಟು. ನೋಡ್ಕಂಡ್ ಊಟಕ್ಕೆ ಉಪ್ಪಿನ್ಕಾಯಿ ಬಡ್ಸೊಕು ಅದು ಬುಟ್ರೆ ಈ ಶೇಖ್ರನಂಗೆ ಬಿದ್ದ ತೆಂಗಿನಮರಲಿ ಮರ ಹತ್ತಿಕೆ ಕಲಿಯೊಕು ಹಂಗೆನೆ ಮರ ಬೀಳ್ಸುದು ಕಾಯೆಕು ಅಲ್ಲವೆ ಅಲ್ಲ! ಇಲ್ಲಿಗೆ ಹೈದನ ನೆಟ್ಟುಕಡ್ಡಿ ಶಾಲೆ ಪುರಾಣಕೆ ಅಂದ್ರೆ ಆನ್‌ಲೈನ್ ಕ್ಲಾಸ್ ಪುರಾಣಕೆ ಪೂರ್ಣವಿರಾಮನ ಹಾಕಕ್.

---

**ಅಕ್ಷತಾ ರಾಜ್ ಪೆರ್ಲ**
ಕಯ್ಯನ್‌ಕುಡ್ಲ ಮನೆ, ಕಾಡುಕುಕ್ಕೆ ಅಂಚೆ, ಪೆರ್ಲ–671 552, ಕಾಸರಗೋಡು
8073840389

# ಗುಡ್ಡು ಜೆಡೆನ, ಉದ್ದ ಕೊಡೆಕಾಲ್ನ ಗೂಡೆ...

● **ಕಾರ್ತಿಕ್ ಪದೇಲ**

ಅವ್ಳು ಬಾರಿ ಬಜಬರ್ಸಿದವ್ಳು...

ಇದ್ ಪ್ರೀತಿ ಗೀತಿ ಮೊಣ್ಣ್ ಮೊಸಿಂತೇಳ್ವಂತದ್ ಅಂತದೇನ್ ಅಲ್ಲ..

ಅವ್ಳ ಕೊತ್ತಿಕಣ್ಣ್‌ಗೆ.,

ಅವ್ಳ ಆರ್ ಬೆರ್ಳ್ಗೆ..,

ಅವ್ಳ ಆ ಗುಡ್ಡು ಜೆಡೆನ ಪೊರ್ಲುಗೆ.;

ಅವ್ಳ ಮೋರೆನ ಕುಳಿ ಕುಳಿ ನೆಗೆಗೆ.;

ಆ ಉದ್ದಕೊಡೆಕಾಲ್ನ ಗೂಡೆಗೆ..

ನನ್ನ ಮರ್ತಂವ ನಾ.....

ಇದೆಲ್ಲ ಒಸಿದಿನಗಳ ಹಿಂದೆ ನಡ್ದಾಂಗೆ ಅನ್ಸಿದೆ...

ಆದರೆ ಸತ್ಯ ಯಾಗೊಳು ಕಯ್ಯಿಃ ತೇಳ್ವಾಂಗೆ ಕಳ್ದ್ ಸುಮಾರ್ ಹತ್ತ್‌ವರ್ಸ ಕಳ್ದಿರ್ದು...

ನಿನ್ನೆ ಪೇಸ್‌ಬುಕ್ಕುಲಿ  ನೋಡ್ಕನ ಮಾತ್ರ ಕಂಡದ್ ಯಾವ್ದೋ ಒಬ್ಬ ಲಾಯ್ಕ್‌ನ ಹೈದನೊಟಿಗೆ ದಾರೆಸೀರೆಲಿ,

ಮುಸ್ಕ್ ಬಟ್ಟೆನ ಸೆರೆಲಿ...

ಮೊನ್ನೆ ಒಮ್ಮೆ ಪೇಸ್‌ಬುಕ್ಕು ನೋಡುಕನ ಕೈ, ಕಾಲ್‌ನ ಕಡೆಂದ ಕೊಡಿಮುಟ್ಟ ಮೊದುರಂಗಿ ಇಸಿದ್ದ ಪಟ ಹಾಕಿತ್ತ್..

ಮತ್ತೆ ಒಂದ್ವಾರ ಕಳ್ದ್ ನೋಡ್ರೆ ಲಂಗ ರೊವ್ಕೆಲಿ ಸೆರ್‌ಂಗ್‌ನ ಗಾಳಿಗೆ ಒಡ್ಡಿಕಂಡಿರ್ವ ಪಟಹಾಕಿತ್ತ್... ಮತ್ತೆ ಅಕೇರಿದೇ

ಕೈಲಿ ಹೂನ ಮಾಲೆ ಹಿಡ್ಕಂಡ್ ಪಚರಲಿ ಹೈದಂಗೆ ಒರ್ಚನಿತ್ತ್ ನೆಗಡಿಕಂಡಿತ್ತ್...

ಕಾಲೇಜ್‌ಗೆ ಬಾಕನಳೇ ಅವ್ಳು ಬಾರಿ ಪೊರ್ಲುನ, ಬಾರಿ ಒಳ್ಳಗೂಡೆಯ., ಅವ್ಳೊಟ್ಟಿಗೆ ಯಾರಿಗು ಆಕಿಲೆಂತೇಳಿ ಇಲ್ಲೆ... ಅವ್ಳೊಟ್ಟಿಗೆ ಎಲ್ಲೊವ್ಕ ಬಾರಿ ಕುಸಿ... ಅವ್ಳು ಬೊಳ್ಪಿಗೆ ಕ್ಲಾಸ್ಗೆ ಪೊರ್ಮಳದ ಪೌಡ್ರ್ ಹಾಕಂಡ್ ಒಂದ್ ಉದ್ದ ಕೊಡೆಕಾಲ್ನ ಅಜ್ಜನ ಕೊಡೆ ಹಿಡ್ಕಂಡ್, ಉರೂಂಟ್ ಮೋರೆನ, ಕಣ್ಣ್ ಕರೆಲಿ ಪುನ ಪುನ ತೊಂಡೆಬೊಳ್ಳಿನಾಂಗೆ ಸುರ್ಳಿ ಸುರ್ಳಿ ಬೀಳ್ವ ಕೂದೊಲುನ ಕೆಬಿನ ಒಂದ್‌ಪುಡೆಗೆ ಸೆಕ್ಕ್‌ಸಿಕಂಡ್ ನಡ್ಕಂಡ್ ಬಾಕನ ಉಟ್ಟಲೆ, ಎಲ್ಲೊವು ಎಂತ ಕೆಲ್ಸಲಿ ಇದ್ದೊದುರು ಒಮ್ಮೆ ಅವ್ಳನೆ ತಿರ್ಗಿನೋಡ್ತಿದ್ದ..

ಎಲ್ಲೊವ್ಕ ಕೈಲಿ ಐದೈದ್ ಹತ್ತ್ ಬೆರ್ಳಿದ್ದರೆ, ಅವ್ಳಿಗೆ ಮಾತ್ರ ಆರ್ ಆರ್ ಬೆರ್ಳ್ಗ..ಅದ್ ಪೊಲ್ಸುಂತೊನು ಹೇಳ್ತಿದ್ದ..

ಅವ್ಳು ಹಾಕುವ ದಿನೊಕ್ಕೊಂದೊಂದ್ ನಮೂನೆ ನಮೂನೆನ ಬಟ್ಟೆಗ..; ನಾವ್ಗೆಲ್ಲ ಆಕಿಲೆ ಅವ್ಳು ಹಾಕಿರೆ ಮಾತ್ರನೇ ಲಾಯ್ಕ್ ಕಾಣ್ದುತೇಳೆ ನೆನ್ಸೊಕು ... ಅವ್ಳು ಮತೆ ಯಾರೊಟಿಗುನು ಜಾಸ್ತಿಮಾತಾಡಟ್ಲೆ... ಎಸ್ಟ್ ಬೇಕು ಅಸ್ಟೆ..

ಲೆಕ್ಕದ ನಾಕೈದ್ ಹೈದಂಗಳೊಟ್ಟಿಗೆ ಮಾತ್ರ ಮಾತಾಡ್ತಿತ್ತ್ ಅವ್ಳು... ಆ ನಾಕೈದ್ ಜನರ್ಲಿ ನಾನು ಒಬ್ಬ ಆಕುಂತೇಳಿ ಬಾರಿ ಆಸೆ ನಂಗೆ ಆಗ....ಅವ್ಳೊಟಿಗೆ ಮಾತಡಿಕೆ ಏನೆಲ್ಲ ಕಿಣಿಗಳ ಮಾಡಿ ಅವ್ಳು ಎದ್ರ್‌ಗೆ ಬಾಕನ  ಗಾಳಿ ಹೋದ ಬುಗ್ಗೆನಾಂಗೆ ಆಗಿ ಮಾತಾಡಿಕೆ ಆಗದೆ ಚೋಪರ್ ಆದಂವ ನಾ....

ಪಬ್ಲಿಕ್ ಪರೀಕ್ಸೆ ದಿನ ನಮ್ಮಿಬ್ಬರ ಹಾಲ್ಟಿಕೇಟ್ ನಂಬೊರ್ ಹಕ್ಕಲೆಕ್ಕಲೆ ಬಂದ್ ಅವ್ಳು ಮುಂದೆ ಬೆಂಚಿಲಿ; ನಾ ಅವ್ಳ ಹಿಂದೆ ಬೆಂಚಿಲಿ  ಕುದ್ದಿದ್ದೊರು ಕೂಡ ಸ್ಕೇಲ್, ಪೆನ್ಸಿಲ್, ರಬ್ಬರ್ ಕೇಳ್ವ ನೆವನಲ್ಯಾರ್ ಮಾತಡಿಕಾಗದೆ ಸೋತ್ ನೀರ್ ಕುಡ್ದಂವ ನಾ....

ಹಂಗೆ ಅದ್ ಆದ ಮೇಲೆ ಅವ್ಳ ನಾ ನೋಡ್ದ್ ಪರೀಕ್ಸೆನ ಪಾಸ್ ಪೈಲ್ ದಿನ... ಅದರ್‌ಂದ ಮೇಲೆ ಸುದ್ದಿಲ್ಲೆ; ಮತೆ ಈಗನಾಂಗೆ ಇಪ್ಪೊತ್ತೈದ್ ಗ್ರೂಪ್ ಮಾಡಿ ಮೆಸೆಜ್ ಮಾಡ್ವ ವಾಟ್ಸಾಪ್ ಗ್ರೂಪ್ಗ ಎಲ್ಲ ಇತ್ಲೆ. ಆಗ..ಏನಿದ್ದೊರು ಆಗ ಅಟೋಗ್ರಾಪ್ ಅದರ್ಲಿ “ಪರಿಸರದಿಂದ ದೂರವಾದರು ಪರಿಚಯದಿಂದ ದೂರವಾಗ ಬೇಡ”..

MKMK ಮರೆಯದಿರು (ಮದುವೆಯ ಕಾಗದ ಮರೆಯದೆ ಕೊಡಲು ಮರೆಯದಿರು) ಹಿಂಗೇ ನಾಕ್ ಒಕ್ಕಣೆಗ ಮಾತ್ರ ಇರ್ತಿದ್ದದ್ ಅಸ್ಟೇ ಬುಟ್ರೆ ಬೇರೆನಿಲ್ಲೆ ಆಗೆಲ್ಲ.....

ಹಂಗೆ ಅದ್ ಅಲ್ಲಿಗೇ ಕೈದಾಗಿತ್ತ್...

ಅದರ್‌ಂದ ಮೇಲೆ ಮೊನ್ನೆಮ್ಮೆ ಪೇಸ್‌ಬುಕ್ಲಿ ಅವ್ಳ ಪಟ ನೋಡಿ ಅವ್ಳಿಗೆ ರಿಕ್ವೆಸ್ಟ್ ಕಳ್ಸುವಸ್ಟ್ ಬೆಟ್ರ ಇತ್ಲೆನಂಗೆ... ಹಂಗೆ ನಾ ಅಲ್ಲಿಗೆ ತಂಡಾ ಆದೆ.

ಮೊನ್ನೆ ನಮ್ಮ ಮನೆ ಹಕ್ಕಲೆನೇ ಅಂಗ್ಡಿ ಹಕ್ಕಲೆ ಒಂದ್ ಬೆನ್ಜ್ ಕಾರ್ಲಿ ಗಂಡನೊಟಿಗೆ ಬಂದ್ ಇಳೆಕನನು ನಂಗೆ ಮಾತಾಡಿಕೆ ದೈರ ಸಾಕತ್ಲೆ..

* * *

ಅದಾಗಿ ಇದ್ ಇಂದ್‌ನ ಕತೆ...

ಚ್ಚೇ.. ಇಂದೇ ಹಿಂಗಾಕ, ಕೊಡೆನು ಬುಟ್ಟುಬಂದದಕ್ಕೆ ಒಂದ್ ಹಳೇ; ಯಾರ್ ಜನಗಳೇ ಬಾರದ ಒಂದ್ ಬಸ್ಟಾಂಡ್ಲಿ ಬಂದ್ ನಿತ್ತಳೆ..ಮಳೆ ನಿಲ್ಲುವಾಂಗೆ

ಕಾಂಬಲ್ಲೆ..., ಇಂಟವ್ರ್ಯೂಗೆ ಹೋಕೆ ಇನ್ನ್ ಅರ್ದಗಂಟೆ ಮಾತ್ರ ಇರ್ದು... ಎಂತ ಸಾವು ಮಾಡ್ದು ಇಲ್ಲಿ ಬಸ್ಸ್ ರಿಕ್ಸ ಯಾವ್ದು ಬಾದು ಕಾಂಬದ್ಲೆ...

ಒಂದ್ ಐದ್ ನಿಂಸ ಕಳ್ದಿರ್ದೇನೋ, ಕಣ್ಣಳ್ತೆ ದೂರಲಿ ಒಂದ್ ಸುಂಯ್ಯಂತೇಳಿ ಬಾರಿ ತುರ್ತುಲಿ ಬರ್ತಿದ್ದ ಕಾರ್ ಒಮ್ಮೆಂಗೆ ಗುಳ್ಟ ಹೊಡ್ದವರಾಂಗೆ ಟಮ್ಮ ನಿತ್ತತ್, ಕಾರ್ ಬುಟ್ಟುಕಂಡಿದ್ದೊವು ಎಸ್ಟ್ ಸ್ಟಾರ್ಟ್ ಮಾಡಿಕೆ ನೋಡ್ರು ಕಿರ್ರ್.... ಕಿರ್ರ್... ತೇಳಿ ಸಬ್ದ ಬರ್ತಿತ್ತೇ ಹೊರ್ತ್ ಸ್ಟಾರ್ಟ್ ಆತಿತ್ಲೆ... ಸುರುಗೆ ನಾ ಗೋಸ್ಟಿ ಮಾಡ್ತ್‌ಲೆ ಮತೆ ಸೆರಿ ನೋಡ್ರೆ ಯಾರ್ ಅದ್.., ಅದೇ ಮೊನ್ನೆ ನೋಡ್ದ ಬೆನ್ಜ್ ಕಾರ್, ಗುಡ್ಡುಜೆಡೆನ ಉದ್ದಕೊಡೆ ಕಾಲ್ನ ಗೂಡೆ ಗಂಡನೊಟ್ಟಿಗೆ ಬಂದ್ ಇಳ್ದಿತ್ತಲ ಅದೇ ಕಾರ್... ಮತ್ತೆ ಅನ್ನೋನಲಿ ನಂಬರ್ ಪ್ಲೇಟ್ ಕೂಡ ನೋಡ್ದೆ... ಹೌದು ಅದುವೇ ಕಾರ್. ಅತ್ತಳೇ ನೋಡಿಕಂಡ್ ಇದ್ದೆ ಅದ್ ಕಾರ್ ಬುಟ್ಟುಕಂಡಿದ್ದದ್ ಅವ್ಳೇ ಕೊತ್ತಿಕಣ್ಣ್‌ನ, ಆರ್ ಬೆಳ್ನ್ ಅದೇ ಗೂಡೆ, ಆ ಮಳೆಗೆ ಡ್ರೈವರ್ ಸೀಟ್‌ಂದ ಇಳ್ಟಂದ್ ಕಾರ್ನ ಟಯರಿಗೆ ಸಿಟ್ಟ್‌ಲಿ ಹಾರಿ ಒಂದ್ ಮೆಟ್ಟಿದ್, ಮಳೆ ಜೋರ್ ಇದ್ದರ್‌ಂದ ಚೆಂಡಿ ಆಕಂಡೆ ಒಳೆಗೆ ಹೋಗಿ ಕುದ್ದತ್....

ಹೋಗಿ ಕುದ್ದೊವ್ಳು ಕೂಡ ಏನೋ ಕುಂಡೆಕರ್‌ಂಚಿದ ಕೊತ್ತಿನಾಂಗೆ ಒಮ್ಮೆ ವಾಚ್ ನೋಡ್ದೆ ಸ್ಟೇರಿಂಗ್ಗೆ ಬೊಟ್ಟಿದೆ ಮತ್ತೆ ವಾಚ್ ನೋಡ್ದೆ ತರಾತುರಿಲಿ ಏನೆಲ್ಲ ಮಾಡ್ತಿತ್ತ್... ನೋಡ್ಕನನೆ ಗೊತ್ತಾತಿತ್ ಅವ್ಳ್ ಎಲ್ಲೋ ಮೀಟಿಂಗಾ ಅಲ್ಲಾ ಎಂತದೋ ತುರ್ತ್ ಕೆಲ್ಸಕೆ ಹೊರ್ಟುಟು ನೊಡುಲಿ ಹಿಂಗೆ ಕಾರ್ ಕೈ ಕೊಟ್ಟುಟು...

ಇದ್ ಒಳ್ಳೆ ಚಾನ್ಸ್‌ಯ.., ನನ್ನ ವಿಸಯ ನೀವ್ಗಿನ್ನು ಹೇಳ್ತ್‌ಲೆಲ.., ನಾ ಮೆಕಾನಿಕಲ್ ಕಲ್ತ್, ಪಾರಿನ್ ನೋಡೊಕು, ಪಾರಿನ್ಲಿ ದುಡೆಕು ದುಡ್ಡು ಮಾಡೊಕು ಅಂತೇಳಿ ಹುಚ್ಚಿಲಿ ದುಬಾಯಿಗೆ ಹೋದೆ, ಅಲ್ಲಿ ಒಂದ್ ದೊಡ್ಡ ಕಾರ್ ಕಂಪೆನಿಲಿ ಮೆಕಾನಿಕ್ ಆಗಿ ಕೆಲ್ಸನೂ ಸಿಕ್ಕಿತ್ತ್... ಆದರೆ ಅಲ್ಲಿ ಅವರ ಸಾವುನ ಸುಡ್ಗಾಡ್ನ ಬಿಸ್ಲುನು ಈ ಮನೆ, ನೆಂಟ್ರ್, ಊರ್ ಬುಟ್ಟು ಆ ಯಾವ್ದೋ ಮೂಲೆಲಿ ಗೋಡೆನ ಹಲ್ಲಿನಾಂಗೆ ಬೊದ್ಕೊಕಲಂತೇಳಿ ಬೆಚ್ಚಲಿ ಒಂದ್ ಒರ್ಸಲೇ ಓಡಿ ಬಂದ್.. ಕೆಲ್ಸ ಇಲ್ಲದೆ ಬೆಂಗ್ಳೂರ್ಲಿ ದೋಸ್ತಿ ಮನೆಲಿದ್ದವಂಗೆ ಆಚೆಮನೆ ಹೈದ ಹೇಳ್ದಕ್ಕೆ ಇಂದ್ ಒಂದ್ ಇಂಟವ್ರ್ಯೂಗೆ ಹೊರ್ಟವ ನಾ...ಈ ಸಾವುಕಡ್ದ ಮಳೆಂದಾಗಿ ಬಾಕಿ ಆಗಿದ್ದೆ.... ಈಗ ನೋಡ್ರೆ ಮಳೆ ಬಂದೊರು ನನ್ನ ಆ ಹಳೇ ಕೊತ್ತಿಕಣ್ಣ ಗೂಡೆಕಾಂಬಕೆ ಸಿಕ್ಕಿತಲಂತೇಳಿ ಕುಸೀ ಆತ್..

ಏನೇ ಆಗಲಿ ಇದ್ ಚಾನ್ಸ್ತ್ ನೆನ್ಸಿದೆ ಗೂಡೆನ ಕಾರ್ ಹೇಂಗೂ ಹಾಳಾವ್ಟು ನಂಗೆ ಗೊತ್ತಿಲ್ಲದ ಕಾರ್ ರಿಪೇರಿನ...? ಅದರ ಕಣ್ಣ್ ಮುಚ್ಚಿ ಬುಡಿಕೆ ಮುಂದೆ ರಿಪೇರಿ ಮಾಡಿ ಕೊಡಕ್...

ಕಾಲೇಜ್ಗೆ ಹೋಕನ ಮಾತಡಿಕೆ ಬೆಟ್ರ ಇಲ್ಲದೆ ಬಾಕಿ ಆದ್ ಇಂದ್ ರಿಪೇರಿನ ನೆವನಲಿ ಆರ್ ಅವ್ಪೊಟಿಗೆ ನನ್ನ ಪಂಡ್ನ ಪರಿಚಯ ಎಲ್ಲ ಹೇಳಿ ಮಾತಾಡ್ರೆ ಹೇಂಗೆತ ನೆನ್ಸಿಕಂಡೆ....

ಇಂಟರ್ವ್ಯೂ ಇದ್ದೊದ್ದರು ಗಡ್ಡತೆಗೆದೆ ಚೊಪ್ಪುಕೊರ್ಗನಾಂಗೆ ಗಡ್ಡಬುಟ್ಟ್ ಕಂಡಿರವ ನಾ... ಅದಲ್ಲದೆ ನಾನು ಅವ್ಕ ಕಾಲೇಜ್ ಮುಗ್ಸಿ ಕಮ್ಮಿಲಿ ಕಮ್ಮಿ ತೇಳ್ರೂ ಹತ್ತೆನರ್ಡ್ ಒರ್ಸಕಳ್ದಿರ್ದು ಕಂಡದೆ, ಅವ್ಳಿಗೆ ಗುರ್ತ ಸಿಕ್ಕುದೋ ಇಲ್ಲೆನಾ...?

ನಾ ಪರ್ಚಯ ಹೇಳಿಕಂಬೊದಾ ಬೇಡನಾಂತೇಳಿ ಮತ್ತೊಮ್ಮೆ ಏಕಭಜನೆ ದಿನ ಇರ್ಲಿಂಡಿ ಜೋರ್ ತಾಳಬೊಟ್ಟಿ ಬೊಟ್ಟಿ ಬೋಳ್ವಾಕನ ನಿಲ್ಸುಕನ ಕೆಬಿ ಗುಂಯ್ಯ.. ತೇಳ್ವಾಂಗೆ ಕೆಬಿ ಬಂದ್ ಆತ್... ಅವ್ಪೊಟಿಗೆ ಮಾತಾಡ್ದರ ನೆನ್ಸಿಕನನೆ ಕಣ್ಣ್ ಮೆಟ್ರೆ ಮೆಟ್ರೆ ಆತ್ನಂದ್..

ಮಳೆ ಹಣ್ಣ ಕಮ್ಮಿ ಆದಾಂಗೆ ಕಂಡತ್, ಏನಾರ್ ಆಗಲಿಂತೇಳಿ ಹಜ ಮುಂದೆ ಇಸಿದೆ.., ಕಾರ್ನ ಹಕ್ಕಲೆ ಹೊರ್ಟೆ, ಸಣ್ಣಕೆ ಮಳೆ ಹನ್ಕ್ತಾ ಇತ್ತ್..

ಕಾರ್ ಹಕ್ಕಲೆ ಹೋಕನನೆ ಅವ್ಕ, ದೇವ್ರೇ ಯಾರಾರ್ ಬರ್ಲಿ ದೇವ್ರೇಂತೇಳ್ಯೇ ಕಾದ್ಕ್ಕಂಡಿತ್ತ್ಕ್ಕಂಡದೆ, ಕಾರ್ನ ಕನ್ನಡಿ ಕೆಳಗೆ ಇಳ್ಸಿದ್ ಕಾರ್ ಸ್ಟಾರ್ಟ್ ಆಗ್ತಿಲ್ಲೆ ಸರ್ ಒಮ್ಮೆ ನೋಡಿ ಒಂದ್ ಉಪಕಾರ ಮಾಡ್ಯರಾಂತ ಕೇಳ್ತ್...

ನಾ ಹೇಂಗು ಸುರುಗೆ ನೆನ್ಸಿಕಂಡ್ ಬಂದಾಂಗೆ ಹಾಂ ತೇಳ್ದೆ ನಂಗಿದ್ದ ಕಾರ್ ರಿಪೇರಿನ ಅನ್ಬವದಾಂಗೆ ಕಾರ್ ಪ್ಲಗ್ಗಿ ವಯರ್ ಸಡ್ಲ ಆಗಿತ್ತ್ ಅದರ ರಪಕ್ಕ ಸೆರಿ ಮಾಡಿಕೊಟ್ಟೆ..

ಅವ್ಳಿಗೆ ಹೋದ ಜೀವ ಬಂದಂಗಾಗಿ ನಂಗೆ ತುಂಬ ಉಪಕಾರಾ ಆತ್ ಅದ್ ಇದ್ಂತ ಲಂಡ್ ಲುಸ್ಕ್ ತೇಳ್ತ್...

ನಾ ತೊಂದರಿಲ್ಲೆಂತೇಳ್ದೆ...

ಬನ್ನಿ ನಿಮ್ಮ ಎಲ್ಲಿಹೋತೊಳರಿ ಅಲ್ಲಿಗೆ ಬುಟ್ನೆಂತೇಳ್ತ್....

ನಾ ಬೇಡತ ಹೇಳ್ದೆ...

ಮತ್ತೆ ನೀವು ಎತ್ತ ಹೋತೊಳರಿಂತ ಕೇಳ್ತ್...

ನಾ ಇಂಟ್ರ್ಯೂ ಹೋಗ್ತಿರ್ವ ಜಾಗೆನ ಹೆಸರ್ ಹೇಳ್ದೆ..

ಅದ್ಕೆ ಅವ್ಕ ನಾ ಅತ್ತಳೇ ಹೋತಾ ಒಳೆ ಬನ್ನಿ ನಿಮ್ಮ ಅಲ್ಲೇ ಬುಟ್ಟು ಹೋನೆಂತೇಳ್ತ್... ನಾ ಎದ್ರ್ಂದ ಬೇಡಂತೇಳ್ರು ಅವ್ಕ ಒತ್ತಾಯ ಮಾಡ್ರೆ ಪೊಯಿಂತೇಳಿ ರಡೀ ಇದ್ದೆ... ಅವ್ಕ ಒತ್ತಾಯಲಿ ಗಾಡಿ ಹತ್ತಿದೆ...ಕಾರ್ ಮುಂದೆ ಮುಂದೆ ಹೋಕನನೂ ನಂಗೆ ಅದೇ ತಲೆಬಿಸಿನಾ ಪಂಡ್ನ ಪರ್ಚಯ ಹೇಳಕಾ ಬೇಡನ.., ಅವ್ಳಿಗೆ ಗುರ್ತ ಸಿಕ್ಕಿರ್ದಾ.,? ಅಲ್ಲ ಗುರ್ತಸಿಕ್ಕಿತೇಲೆನ..? ಎಂತ ಮಾಡ್ದು...

ಈಗ ಅವ್ಳೇ ಹೇಳಿಕೆ ಸುರುಮಾಡ್ತ್ ನಮ್ಮದ್ ಒಂದ್ ಕಾರ್ ಶೋರೂಮ್ ಉಟ್ಟು, ಗಂಡ ಕೆಲ್ಸ ಉಟ್ಟುಂತ ಡೆಲ್ಲಿಗೆ ಹೋಗಳ ಹಂಗೆ ಇಂದ್ ನಮ್ಮ ಕಂಪೆನಿಲಿ ಇಬ್ಬರ್ ಕಾರ್ ಮೆಕಾನಿಕ್ಗ ಬೇಕಿತ್ತ್ ಹಂಗೆ ಇಂದ್ ಇಂಟರ್ವ್ಯೂ ನಾನೆ ಮಾಡೊಕು...

ಅದರ ನೊಡುಲಿ ಈ ಕಾರ್ ಹಾಳಾತ್, ನಾನೆ ಇಂಟರ್ವ್ಯೂಗೆ ತಡ ಆಗಿ ಹೋದರೆ ಹೇಂಗೆಂತ ತಲೆಬಿಸಿಲಿ ಇದ್ದೆ... ಅದೇ ಘಳ್ಗೆಲಿ

ನೀವು ಬಂದದ್ ಬಾರಿ ಉಪಕಾರ ಆತ್.... ನೀವು ದೇವ್ರು ಬಂದಾಂಗೆ ಬಂದರಿ.. ಮತ್ತೆ ಲಂಡ್ ಲುಸ್ಕ್ ಸುರು ಮಾಡ್ತ್....

ಅಕೇರಿಗೆ ಅವ್ಳು ಹೇಳ್ದರ ಕೇಳಿ ನಂಗೆ ಈಗ ಹುಚ್ಚಿ ಹಿಡೆಕೆ ಒಂದೇ ಬಾಕಿ...

ಅವ್ಳು ಹೇಳ್ದ ಕಂಪೆನಿನೇ ನಾ ಈಗ ಇಂಟರ್ವ್ಯೂಗೆ ಹೊರ್ಟದ್...

ಈಗ ಪುನ ದೊಡ್ಡ ಸಮಸ್ಯೆಸುರಾತ್ ನಂಗೆ, ಪರ್ಚಯ ಹೇಳ್ದಾ ಬೇಡನ...? ನಾ ಹೇಳಿ ಅವ್ಳಿಗೆ ಪಂಡ್ದ್ ನೆನ್ಪಾಗದೆ,

ನಾ ಒಂದ್ ಅವ್ಳಿಗೆ ಉಪಕಾರ ಮಾಡ್ದೆಂತೇಳಿ ನಂಗೆ ಕೆಲ್ಸಸಿಕ್ಕಲಿಂತೇಳಿ ನಾ ಲೊಟ್ಟೆ ಹೇಳ್ತ ಒಳೆತೇಳಿ ಅವ್ಳು ನೆನ್ಸಿಕಂಡ್ರೆ ಎಂತಮಾಡ್ದು....

ಚ್ಚೇ ಎಂತ ಮಾಡೊಕು ನಾ ಅಂತೇಳಿ ಗ್ರೇಸಿಕಂಡ್ ಇರ್ಕನನೆ ಅವರ ಕಾರ್ ಶೋರುಮ್ ಎತ್ತಿತ್.. ಹೊರಗೆ ಜೋರ್ ಮಳೆಬರ್ತಾ ಉಟ್ಟು...ಅವ್ಳು ಆಚೆಪುಡೆಲಿ ಸೀಟ್ಲಿ ಇದ್ದ ಕೊಡೆನ ತೆಗ್ದ್ ಬುಳ್ಗಿಸಿ ಇಳ್ತ್..ಅದ್ನೋಡ್ರೆ ಅದೇ ಅಂದ್ನ ಪಂಡ್ನ ಉದ್ದಕೊಡೆಕಾಲ್ನ ಕೊಡೆ.., ಅದೇ ಗುಡ್ಡುಜೆಡೆನ ಗೂಡೆ., ಆ ಸರ್ಳೆ ಕಣ್ಣ್ ಕರೆಲಿ ಸುರ್ಳಿ ಸುರ್ಳಿ ಬೀಳ್ವ ಕೂದೊಲುನ ಮೆಲ್ಲಂಗೆ ಕೆಬಿಗೆ ಸೆಕ್ಕಿಸಿಕಂಡ್ ಇಳೆಕನ ಅವ್ಳ ಆರ್ನೆ ಬೆರ್ಳ್ ಆಂಜಿತ್, ಅದೇ ಆರ್ನೆ ಬೆರ್ಳನ ಪೊಲ್ಸ್ಂದಳೆ ಇವ್ಳು ಈ ಬೆನ್ಜ್ ಕಾರ್ಲಿ ತಿರ್ಗುತಿದ್ರುಂತ ನನ್ನ ಮೊನ್ಸ್ ಕೆಬಿಲಿ ಮೈಕ ಕಟ್ಟಿ ಹೇಳ್ತಿತ್ತ್...

ಕಾರ್ಲಿ ಹಿಂದೆಕುದ್ದಿದ್ದ ನನ್ನ, ಬಾಗ್ಲ್ ತೆಗ್ದ್ ಬುಳ್ಗಿದ ಕೊಡೆಒಳೆಗೆ ಅದೇ ಆ ಕೊತ್ತಿಕಣ್ಣ್‌ನ ಗೂಡೆ ನನ್ನ ಕರೆತಿತ್ತ್,

ಆದರೆ ನನ್ನ ಮೊನ್ಸೊಳಗೆ ಇನ್ನೂ ಪರ್ಚಯ ಹೇಳೊಕಾ ಬೇಡನಾ,ಗುರ್ತ ಸಿಕ್ಕಿತಾಂತ ಕೇಳಕಾ ಬೇಡನಾಂತೇಳಿ,

ನಂಗೀಗ ಅಡ್ಕೀಲ್ಲಿ ಬಿದ್ದಾಂಗಾವ್ಟು...

ನೀವೇ ಹೇಳಿ ಈಗ, ನಾ ಹೇಳಕಾ ಬೇಡನ..?

ಏನ್ ಮಾಡೊಕು..?

---

**ಕಾರ್ತಿಕ್ ಪದೇಲ**
ಪದೇಲ ಮನೆ, ದೇವರಹಳ್ಳಿ ಅಂಚೆ, ಸುಬ್ರಹ್ಮಣ್ಯ, ಕಡಬ ತಾಲೂಕು
ಮೊ : 9481975641




# ನಾಕೂರುಕಯವೆಂಬ ಮುಕ್ತ ಆರಾಧನ ಕ್ಷೇತ್ರ

● **ಕವಿತಾ ಎಂ.ಎಲ್.**

ದಕ್ಷಿಣಕನ್ನಡ ಪುಣ್ಯಕ್ಷೇತ್ರಗಳ ನೆಲೆಬೀಡ್. ಇಲ್ಲಿ ಸಾವಿರಾರ್ ದೈವದೇವರ್‌ಗ ಭಕ್ತರ್ನ ಹರ್ಸಿ ಹಾರೈಸುತ್ತೊಳೊ. ಹಸಿರ್‌ಕಾಡ್ಗಳ ನಡುವೆ ಮೈಮನಗಳನ್ನ ಪುನೀತಗೊಳಿಸೊ ದೇವಸ್ಥಾನ ಒಂದು ಕಡೆಲಿ ಇದ್ದರೆ, ಮತ್ತೊಂದು ಕಡೆಲಿ ತಮ್ಮ ಶಕ್ತಿಕಾರರ್ಣಿಕದ ಮೂಲಕ ಜನರ್ನ ಕಾಪಡ್‌ತಿದ್ದ ದೈವಗ ಇಲ್ಲಿ ಉಟ್ಟು. ತುಳುನಾಡು ಹಲವಾರು ದೈವದೇವರುಗಳ ನೆಲೆಬೀಡು, ಸೀಮೆ, ಮಾಗಣೆ, ಗ್ರಾಮ, ಕರೆ, ಹಿಂಗೆ ಪ್ರತಿಯೊಂದು ವಿಭಾಗಕ್ಕೆ ದೈವಗಳ ಮಾಯದ ಅಧಿಕಾರಿಗಳಾಗಿ ನಿರ್ಣಯಿಸಿ ಅದರಂಗೆ ದೈವ ಪ್ರೇರಣೆಯಂಗೆ ರಾಜ್ಯಭಾರ ಮಾಡ್ದವು ನಮ್ಮ ತುಳು ಪೂರ್ವಜರ್.

ಸುತ್ತ ಹಚ್ಚಹಸಿರ್ನ ಕಾಡ್ ಗಿರಿವನಗಳ ಮದ್ಯಲಿ ಲಾಯ್ಕಲಿಕಾಂಬ ಊರೇ ಕೋಡಿಂಬಾಳ. ಕೋಡಿಂಬಾಳಲಿ ಜನರ ನಂಬಿಕೆನ ಒಳಿಸಿಕಂಡ್ ತನ್ನ ಕಾರರ್ಣಿಕನ ತೋರಿಸ್‌ತ್ತಿದ್ದ ಸತ್ಯದ ಜಾಗ ಅಂದ್ರೆ ಅದ್ ನಾಕೂರುಕಯ. ಈ ಕ್ಷೇತ್ರ ಪ್ರಕೃತಿಲೇ ಉಂಟಾದ ದೈವನಿರ್ಮಿತವಾದ ಕ್ಷೇತ್ರ ಆವುಟ್ಟು. ಈ ಕ್ಷೇತ್ರವು ನಮ್ಮ ದಕ್ಷಿಣ ಕನ್ನಡ ಜಿಲ್ಲೆಯ ಕಡಬ ತಾಲ್ಲೂಕಿನ ಕೋಡಿಂಬಾಳ ಮತ್ತೆ ಎಡಮಂಗಲ ಗ್ರಾಮದ ನಾಕೂರು ಎಂಬಲ್ಲಿ ಕುಮಾರಧಾರ ನದಿಲಿ ಇರ್ವ ಒಂದು ಪವಿತ್ರ ಆಳವಾದ ಜಾಗವಾಗುಟ್ಟು. ಈ ಕಯವು ಸಾಧಾರಣ 60 ಮೀಟರ್ ಅಗಲ 150 ಮೀಟರ್ ಉದ್ದ ಹೊಂದಿಟ್ಟು. ಆದರೆ ಇನ್ನೂ ಈ ಕಯದ ಆಳನ ಕಂಡುಹಿಡಿಯಕೆ ಸಾಧ್ಯ ಆತ್ಲೆಗಡ. ಹಿಂದೆ ಇಲ್ಲಿ ರೈಲು ಮಾರ್ಗ ಆಗ್ತ ಇರ್ಕನ ಸೇತುವೆ ನಿರ್ಮಿಸಿಕ್ಕೆ ಸರ್ವೆ ಮಾಡ್ತಿದ್ದೊ, ಆಗ ಕಯಲಿ ಸೇತುವೆ ಆಧಾರ ಸ್ತಂಭ ನಿರ್ಮಿಸಿಕೆ ಆಳ ನೋಡ್ರೆ ಆಳ ಕಂಡುಹಿಡಿಯಕೆ ಆಗದೆ ಮತ್ತೆ ಗಯದ ಮೇಲ್ಭಾಗಲಿ ಸೇತುವೆನ ನಿರ್ಮಾಣ ಮಾಡ್ಯೊಳಾಂತ ಇಲ್ಲಿಯ ಹಕ್ಕಲೆನವು ಹೇಳ್ವೆ.

ಈ ಜಾಗದ ಬಗ್ಗೆ ಹಲವಾರು ಜನಪದ ಕಥೆಗ ಪ್ರಚಲಿತಲಿ ಉಟ್ಟು.

**ಪಡೆಜ್ಜರು ಗೌಡರ ಕಥೆ**

ಕಯದ ಸಮೀಪಲಿ ಇರುವ ಪಡೆಜ್ಜರು ಗೌಡರ ಮನೆತನದ ಒಂದು

ಕುಟುಂಬದವು ಗದ್ದೆ ಬೇಸಾಯನ ಮಾಡ್ಕಂಡ್ ತಮ್ಮ ಜೀವನ ನಡ್ಸಿಕಂಡ್ ಬರ್ತ್ತಿದ್ದೊ. ಹಿಂಗೆ ಇರ್ಕನ ಒಂದು ದಿನ ಗದ್ದೆಲಿ ಭತ್ತದ ಪೈರು ಬೆಳ್ಕೊಂಡು ಬಾಕನ ರಾತ್ರಿ ಬಂದ್ ಈ ಪೈರ್‌ನ ಯಾವುದೋ ಪ್ರಾಣಿಗ ತಿಂದು ನಾಶ ಮಾಡ್ದು ಈ ಗೌಡ್ರಿಗೆ ಗೊತ್ತಾತ್. ಅಂದ್‌ಂದ ಅವು ಕೆಲ ದಿನಗಳ ತನಕ ರಾತ್ರಿ ಪ್ರಯತ್ನ ಪಟ್ಟ್ ನೋಡ್ಕನ ಸಾಧಾರಣ ಬೆಳಗ್ಗಿನ ಜಾವದ ಸಮಯಕ್ಕೆ ಕಪಿಲೆ ದನ ಬಂದ್ ಇವರ ಗದ್ದೆಯ ಪೈರ್ನ ತಿಂದ್ ನಾಶ ಮಾಡ್ದು ಇವ್ಕೆ ಕಂಡ್‌ಬಾತ್ ಆಗ ಗೌಡ್ರು ಅದರ ಹಿಂದೆಂದ ನಾಕೂರುಕಯವಿರುವ ಪ್ರದೇಶಕ್ಕೆ ಬಂದೊ. ದನ ಗಯಾಪ್ರದೇಶದ ನದಿಗೆ ಹಾರ್ದು ಕಂಡತ್. ಆಗ ಗೌಡ್ರು ಅದರ ಬಾಲ ಹಿಡ್ಕಂಡ್ ಅದರೊಟ್ಟಿಗೆ ನದಿಯ ತಲಭಾಗಕ್ಕೆ ಹೋದೊ. ಅಲ್ಲಿ ಅವ್ಕೆ ಗೋಪಾಲಕೃಷ್ಣ ದೇವ್ರ ಸಾನಿಧ್ಯ ಇರ್ದು ಗೊತ್ತಾತ್. ಅಲ್ಲಿ ಗೊತ್ತಾದ ವಿಚಾರನ ಯಾರಿಗೂ ಹೇಳಿಕೆ ಆಗದ್, ಹೇಳ್ರೇ ಕುಟುಂಬ ತೊಂದರೆಗೆ ಗುರಿ ಆದೆ ಮತ್ತೆ ಅಂಗ ಊನತೆ ಬಂದದೆನಂತ ಅವಂಗೆ ಅಲ್ಲಿ ಆಜ್ಞೆ ಆಗಿದ್ದದೆ. ಆದರೆ ಮೇಲೆ ಬಂದ ಯಜಮಾನ ಅವನ ಹೆಣ್ಣ್‌ನ ಒತ್ತಾಯಕ್ಕಾಗಿ ಆ ವಿಷಯನ ಅವನ ಹೆಣ್ಣಿಗೆ ಹೇಳ್ದೆ. ಮತ್ತೆ ಈ ವಿಷ್ಯ ಇಡೀ ಊರಿಗೆ ಗೊತ್ತಾದೆ. ನಾಕೂರು ಗಯಾ ಕ್ಷೇತ್ರದ ಹತ್ರ ಈಗಲೂ ಆ ಕುಟುಂಬ ಉಟ್ಟು.ಈ ಕುಟುಂಬದವ್ಕೆ ಈಗಲೂ ಕಿವಿ ಕೇಳದ ಸಮಸ್ಯೆ ಉಟ್ಟು.

**ಹುತ್ತಕ್ಕೆ ಹಾಲೆರೆವ ಹಸು**

ಡಾ. ಪುರುಷೋತ್ತಮ ಬಿಳಿಮಲೆ ಇವರ ಜನ ಸಂಸ್ಕೃತಿ ಜಾನಪದ ಲೇಖನ ಕೃತಿಲಿ ಇರುವ ಹಂಗೆ ಸುಮಾರ್ ಹಿಂದೆ ನಾಕೂರ್ನ ಹತ್ರ ದನ ಕಾಯುವ ಹೈದ ಒಬ್ಬ ಇತ್ತ್. ದನಗಳ ಲಾಯಿಕ್ ಮೇಯ್ಸಿ ಹಿಂಬೊತ್ತು ಹಟ್ಟಿಗೆ ಹೊಡ್ಕಂಡ್ ಬಾದು ಅವನ ಯಾಗೊಳ್ನ ಕೆಲ್ಸ. ಒಂದು ದಿನ ದನಗಳ ಯಜಮಾನ ಕಾವಲ್ನ ಹೈದಂಗೆ ಜೋರ್ ಮಾಡ್ದೆ. ಕಪಿಲೆ ದನದ ಕೆಚ್ಚಲು ಬರಿದಾಗುಟ್ಟು. ಕಾಡ್ಲಿ ದನಗಳ ಮೇಸುದು ಬುಟ್ಟು ಕೆಚ್ಚಲ್‌ಂದ ಹಾಲ್ ಕುಡಿಯಕ್ಕೆ ಕಲ್ತೊಳನಾ...? ಹೈದ ನಾ ಹಂಗೆ ಮಾಡ್ಲೆಂತ ಪ್ರಮಾಣ ಮಾಡಿ ಹೇಳ್ದೆ. ಘಟನೆ ಮಾರ್ನೆದಿನನೂ ಮುಂದುವರ್ದದೆ. ಈ ಸರ್ತಿ ಹೈದ ಒಂದೆರಡ್ ಪೆಟ್ಟ್‌ಸ ತಿಂದ್‌ಕನ್ದೆ. ಮಾರ್ನೆದಿನ ಹೈದ ಅದರ ಬೆನ್ನು ಬುಟ್ಟತ್ಲೆ ಅವ ನೋಡಿಕಂಡ್ ಇದ್ದಂಗೆ ಕಪಿಲೆ ಕಾಡೊಳಗೆ ಬಲ್ಲೆಲಿ ಇದ್ದ ಹುತ್ತವೊಂದಕ್ಕೆ ಹಾಲು ಕೊಟ್ಟತ್. ಒಮ್ಮೆಲೆ ಹಾರ್ದ ಹೈದ ಕಪಿಲೆನ ಬಾಲ ಹಿಡ್ತ್. ಕಪಿಲೆ ಸೀದ ನಾಕೂರು ಹೊಳೆಗೆ ಹಾರ್ತ್. ಒಟ್ಟಿಗೆ ಹೈದನ ಎಳ್ಕಂಡ್ ಹೋತ್. ಹಂಗೇ ಕಪಿಲೆದನ ಹೈದನೊಟ್ಟಿಗೆ ಕಾಣೆಯಾದ ಜಾಗಲಿ ಲಿಂಗರೂಪೀ

ದೈವವೊಂದಿತ್ತು. ಆ ದೈವಕ್ಕೆ ಒಂದು ಚಾವಡಿನೂ ಇತ್ತು. ಈಗ ಅದ್ ಹಳ್ಳಲಿ ಮುಳ್ಗಿ ಹೋದರ್‌ಂದ ಬೇರೆಯವ್ಕೆ ಕಾಂಬೊದ್ಲೆ. ಆದರೆ ನದಿಲಿ ನೀರ್ ಕಮ್ಮಿ ಆಕನ ಮಡಿ ಆಗಿರುವವ್ಕೆ ದೇವಳದ ಕಳಸ ಕಂಡದ್‌ಸ ಉಟ್ಟು.

## ಬ್ರಾಹ್ಮಣ ಹಾಗೂ ಅವರ ಪತ್ನಿ

ಬಹುಪುರಾತನಕಾಲಲಿ ಈಗ ಕಯವಿರುವ ಮೇಲ್ಭಾಗಲಿ ಬಲಭಾಗದ ದಡಲಿ ಒಂದು ಗೋಪಾಲಕೃಷ್ಣ ದೇವರ ದೇವಸ್ಥಾನ ಇತ್ತ್ ಗಡ. ಅಲ್ಲಿಗೆ ಪೂಜೆಮಾಡಿಕೆ ಎಡಭಾಗದಿಂದ ಒಬ್ಬ ಅರ್ಚಕ ಪೂಜೆಗೆ ಬಾಕನ ಅವು ನದಿನ ಸುಳಿನ ದಾಟಿಕೆ ಅರ್ಚಕ  ಬಾಳೆಎಲೆನ ನೀರ್ ಮೇಲೆ ಇಸಿ ಆ ಬಾಳೆಲೆ ಮೇಲೆ ಕುದ್ದುಕಂಡ್ ಬಲಭಾಗಲಿ ಇದ್ದ ದೇವಸ್ಥಾನಕ್ಕೆ ಪೂಜೆಗೆ ಬರ್‌ತಿದ್ದೊ ಹಿಂಗೆ ಸ್ವಲ್ಪ ದಿನ ಆದಂಗೆ ಈ ರೀತಿಲಿ ದೇವಸ್ಥಾನಕ್ಕೆ ಅರ್ಚಕ ಹೋಗಿ ಬಾದರ ನೋಡ್ದ ಅರ್ಚಕರ ಹೆಣ್ಣ್ ನೋಡಿ ಒಂದು ದಿನ ನಾನು ನಿಮ್ಮೊಟ್ಟಿಗೆ ದೇವಸ್ಥಾನಕ್ಕೆ ಬಂದೆನೆ ತಾ ಮಳೆಗಾಲಲಿ ಹಠ ಮಾಡ್ತ್. ಹಂಗೆನೇ ಅರ್ಚಕರು ನೀ ಬಾದು ಬೇಡಂತ ಹೇಳ್ರು ಕೇಳದೆ ಹಟಮಾರಿತನದಿಂದ ಅರ್ಚಕರ ಒಟ್ಟಿಗೆ ದೇವಸ್ಥಾನಕ್ಕೆ ಅವರ ಹೆಣ್ಣು ಹೊರಟಾತ್. ಯಾಗೋಳ್‌ನಂಗೆ ಅರ್ಚಕರು ನೀರ್‌ನ ಮೇಲೆ ಬಾಳೆ ಎಲೆ ಹಾಕಿ ಅದರ ಮೇಲೆ ಇಬ್ಬರು ಕುದ್ದುಕಂಡ್ ಹಳ್ಳ ದಾಟ್‌ಕನ ನೆರೆಗೆ ಸಿಕ್ಕಿ ಇಬ್ಬರೂ ನೀರು ಪಾಲಾದೊ ಮೇಲೆ ಇದ್ದ ದೇವಸ್ಥಾನ ನೆರೆಲಿ ಕೊಚ್ಚಿಹೋತ್ ಅದೇ ದೇವಸ್ಥಾನ ಕಯದ ಅಡಿಲಿ ಉಟ್ಟುತಾ ವಿಷಯನ ಜನಗ ಕಥೆಯಾಗಿ ಹೇಳುವೆ. ಆದರೆ ಜನ ಹೇಳುವ ಈ ಕಥೆಗೆ ಸಂಬಂಧ ಪಟ್ಟಂಗೆ ಈ ಸ್ಥಳಲಿ ಯಾವುದೇ ಕುರುಹುಗ ಸರಿಯಾಗಿ ಕಾಂಬಕೆ ಸಿಕ್ಕುದ್ಲೆ.

ನಾಕೂರು ಗಯಲಿ ಹಲವಾರು ವರ್ಷಂದ ಒಂದಲ್ಲಾ ಒಂದು ಕಾರಣಿಕಗ ನಡ್ದದೆ. ಊರ ಪರ ಊರ್‌ನ ಜನಗ ಇಲ್ಲಿ ಬಂದು ಹರ್ಕೆನ ಒಪ್ಪಿಸುತ್ತೊಳ. ದನ–ಕರುಗಳಿಗೆ ತೊಂದರೆ ಆಕನ ಅದರ ಸರಿ ಮಾಡಿಕೆ ಇಲ್ಲಿಗೆ ಹರ್ಕೆ ಹೇಳ್ರೇ ಫಲಿಸಿದೆ. ದನ ಕರು ಹಾಕಿ ಹದಿನೈದು ದಿನ ಕಳ್ದು ಹದಿನಾರನೆ ದಿನ ದನದ ಯಜಮಾನ ಕಯದ ನೀರ್‌ಲಿ ಮಿಂದ್ ಗಯದ ದಂಡೆಗೆ ಬಂದ್ ಕದಳಿಬಾಳೆ ಎಲೆನ ಮೇಲೆ ಬೆಳ್ತಕ್ಕಿನ ಹಾಕಿ ಅದರ ಮೇಲೆ ಕಾಯಿಗಡಿನ ಒಡ್ದು ಎರಡು ಭಾಗ ಮಾಡಿ ಹಾಲು ಹೊಯ್ದು ಇಸೊಕು. ಮತ್ತೆ ಚಂಡಿ ಆದ ಹತ್ತಿನ ಬತ್ತಿನ ಹೊತ್ತಿಸಿ ಇಸೊಕು ಮತ್ತೆ ನದಿನ ಪೂರ್ವಭಾಗಕ್ಕೆ ಮೊರೆಮಾಡಿ ಬಾಳೆಲೆನ ಅಡಿಂದ ಎರಡು ಕೈಲಿ ಎತ್ತಿ ಹಿಡ್ದ್ ಗಯದ ನೀರ್‌ನ ಮೇಲೆ ಇಸಿ ಕೈ ಮುಗ್ದ್ ಮತ್ತೆ ಮೊದ್‌ಲೇ ಇಸಿದ

ಎರಡು ಕಾಯಿಗಡಿಲಿ ಒಂದ್ ಗಡಿನ ತಕಂಡ್ ಅದರಲಿ ಇಸಿದ ಹಾಲ್‌ನ ಎಲೆಗೆ ಹಾಕಿ ಆ ಗಡಿನ ಮತ್ತೆ ಹಾಲ್ ತಂದ ಪಾತ್ರೆಲಿ ನದಿನ ನೀರ್‌ನ ತೀರ್ಥರೂಪಲಿ ಮನೆಗೆ ತಕಂಡ್ ಹೋಗಿ ದನ ಮತ್ತೆ ಕರುಗೆ ಕೊಟ್ಟು ಮತ್ತೆ ಮನೆಯವು ಎಲ್ಲ ತಕಂಬೊದ್ ಕ್ರಮವಾಗುಟು. ಆದರೆ ಇತ್ತೀಚಿನ ವರ್ಷಲಿ ಇಲ್ಲಿ ಮೀನುಗ ಹೆಚ್ಚಾಗಿ ಇರುದರ್‌ಂದ ನೀರಿಗೆ ಕಾಯಿಗಡಿನ ಎಲೆ ಬುಡಿಕೆ ಅವಕಾಶ ಕೊಡ್ದುಲೆ ಎಲ್ಲದರಸ ಮೀನ್‌ಗ ತಿಂದ್ ಮುಗ್ಸುವೇ ಇನ್ನೂ ಇಲ್ಲಿ ಚರ್ಮರೋಗ ಮತ್ತೆ ಕೈಲಿ ಕೆಡು ನಿವಾರಣೆಗೆ ಕುಡು ಕೊಟ್ಟರೆ ಕಮ್ಮಿ ಆದೇಂತ ಇಲ್ಲಿನ ಜನರ ನಂಬಿಕೆ. ಅದಲ್ಲದೆ ಸಂತಾನಭಾಗ್ಯ ಮತ್ತೆ ಕೆಲವು ಇಷ್ಟಾರ್ಥಕ್ಕೆ ಆಗಿ ಬಂಗಾರಕೂಸು, ಬೆಳ್ಳಿಯತೊಟ್ಲು ಹೇಳಿ ಇಷ್ಟಾರ್ಥ ಈಡೇರ್ದ ಮೇಲೆ ಕಯಕ್ಕೆ ಬಂದ್ ಹರಕೆ ಒಪ್ಪಿಸ್ವ ಕ್ರಮವೂ ಉಟ್ಟು.ಇನ್ನೂ ಇಲ್ಲಿ ಇರುವ ಕಯಲಿ ನೂರಾರ್ ದೇವರಮೀನ್‌ಗ ಇದ್ದ್  ಇಲ್ಲಿಗೆ ಬರ್ವ ಭಕ್ತಾದಿಗ ಮೀನುಗಳಿಗೆ ತಿಂಬಕ್ಕೆ ಹುರಿಯೆಕ್ಕಿ ಹಾಕಿ ಖುಷಿಪಟ್ಟವೆ.

**ಓದಿದ ಪುಸ್ತಕಗ**


1. ಡಾ. ಪುರುಷೋತ್ತಮ ಬಿಳಿಮಲೆ, 2008 ಜನಸಂಸ್ಕೃತಿ ಜಾನಪದ ಲೇಖನಗಳು, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು.
2. ಕಾಡುಕುಡೇಲು ಗಣಪತಿ ಭಟ್ಟ, 2010, ಪಂಜಸೀಮಾದರ್ಶನ ಸಮಗ್ರ ಮಾಹಿತಿ. ಭಾರತೀ ಪ್ರಕಾಶನ, ಬೆಂಗಳೂರು
3. ದಿ. ಸುಬ್ರಾಯ ಭಟ್ಟ್. 1994, ನಾಕೂರು ಗಯದ ಬಗ್ಗೆ ಸಂಗ್ರಹಗಳು.


**ಮಾಹಿತಿ ಕೊಟ್ಟವು**

1. ಆನಂದ ಗೌಡ ಪರ್ಲ, ಜಾನಪದ ತಜ್ಞರು, ಏನೆಕಲ್ಲು ಗ್ರಾಮ ಕಡಬ ತಾಲೂಕು, ದ.ಕ.
2. ಶಿವಪ್ಪಗೌಡ ಗಿರಿಯಮಜಲು ಮನೆ, ಎಡಮಂಗಲ ಗ್ರಾಮ ಮತ್ತು ಅಂಚೆ, ಕಡಬ ತಾಲೂಕು
3. ರವಿಶಂಕರ್ ಭಟ್ಟ್ ನಾಕೂರು ಮನೆ, ಎಡಮಂಗಲ ಗ್ರಾಮ ಮತ್ತು ಅಂಚೆ, ಕಡಬ ತಾಲೂಕು
4. ರಾಜೀವಿ ಲಿಂಗಪ್ಪ ಗೌಡ, ಕೊಲ್ಲನ್ರೂಜಿ ಮನೆ, ಎಡಮಂಗಲ ಗ್ರಾಮ ಮತ್ತು ಅಂಚೆ, ಕಡಬ ತಾಲೂಕು

---


**ಕವಿತಾ ಎಂ.ಎಲ್.**
ಕೊಲ್ಲನ್ರೂಜಿ ಮನೆ
ಎಡಮಂಗಲ ಗ್ರಾಮ ಮತ್ತು ಅಂಚೆ
ಕಡಬ ತಾಲೂಕು, ದ.ಕ.




# ಪಂಡ್‌ನ ಕಾಲಲಿ ನಡ್ದ ಸತ್ಯದ ಕತೆ

● ವಾರಿಜ ಸೂರ್ತಲೆ

ಪಂಡ್‌ಲಿ ಒಂದು ಮನೆಲಿ ಗಂಡ, ಹೆಣ್ಣ್ ಮತ್ತೆ ಏಳ್ ಜನ ಗಂಡ್ ಮಕ್ಕ ಇದ್ದೊ. ಹೆಂಗೋ ದುಡ್ದ್ ಅವರ ಜೀವನ ಸಾಗಿಸ್ತಿದ್ದೊ. ಪಂಡ್‌ಲಿ ಜೇನ್ ಕೊಯ್ಯಕೆ ಹೋದು ಜೋರ್ ಇತ್. ಈಗನ ಹಂಗೆ ಜೇನ್ ಕೊಯ್ದರೆ ಅದರ ಮಾರಾಟ ಮಾಡ್ತಿತ್ತ್‌ಲೆ. ರೊಟ್ಟಿಗೆ, ತಂಬಿಟ್ಟ್‌ಗೆ ಎಲ್ಲಾ ಹಾಕಂಡ್ ತಿನ್ನ್‌ತಿದ್ದೊ. ದೊಂಡೆ ಬೇನೆಗೆ ಒಳ್ಳೆ ಮೆಣಸ್ ಹೊಡಿ ಒಟ್ಟಿಗೆ ಕಲ್ಸಿ ತಿಂಬತ್ತಿದ್ದೊ. ಹಂಗೆ ಒಂದು ದಿನ ಜೇನ್ ಹುಡ್ಕೊಕುತ ಗ್ಯಾನ ಆದ ಇಬ್ಬರು ಅಣ್ಣ ತಮ್ಮ ಕಾಡಿಗೆ ಹೋದವೆ. ಕಾಡೆಲ್ಲಾ ಹುಡುಕಿ ಸುತ್ತಾಡಿಕಂಡ್ ಬಾಕನ ಒಂದು ದೊಡ್ಡ ಬಾಳೆ ಮರಲಿ ಜೇನ್ ಕಂಡವೆ. ನಾಳೆ ಕತ್ತಲೆಗೆ ಹೋಗಿ ಜೇನ್ ಕೊಯ್ಯೊಕುತ ಮಾತಾಡಿಕಂಡವೆ. ಮಾರನೆ ದಿನ ಅವ್ವನೊಟ್ಟಿಗೆ ನಾವು ಜೇನ್ ಕೊಯ್ಯಕೆ ಹೋದವೆತ ಹೇಳಿ, ಏಳ್ ಜನ ಅಣ್ಣ ತಮ್ಮಂದರ್ ಹೋರ್ಟವೆ. ಜೇನ್ ಇರುವ ಮರ ಬಾರೀ ದೊಡ್ಡ



ಮರ ಅದರ್ಂದ ಒಂದು ಏಣಿ ಕಟ್ಟಿರೆ ಮರದ ಕೊಡಿಗೆ ಎತ್ತುದುಲೆ. ಹಂಗೆ ಏಳ್ ಜನ ಏಳ್ ಏಣಿಗಳ ಒಬ್ಬೊಬ್ಬ ಒಂದೊಂದರ ಹಂಗೆ ಹೊತ್ತ್‌ಕಂಡ್ ಹೋದವೆ.

ಕಡೇ ತಮ್ಮನೊಟ್ಟಿಗೆ ಏಣಿ ಮರಕ್ಕೆ ಕಟ್ಟಿಕೆ ಹೇಳಿವೆ. ಹಂಗೆ ಅಂವ ಏಣಿನ ಮರಕ್ಕೆ ಕಟ್ಟಿದೆ. ಆ ಏಣಿಗೆ ಸೇರ್ಸಿ ಇನ್ನೊಬ್ಬ ಕಟ್ಟಿದೆ. ಹಂಗೆ ಏಳ್ ಏಣಿನ ಒಬ್ಬೊಬ್ಬನೇ ಒಂದಕ್ಕೆ ಮತ್ತೊಂದುತ ಜೋಡ್ಸುತ ಹೋದವೆ. ಏಳನೇ ಏಣಿ ಕಟ್ಟಿಕನ ಮರದ ಗೆಲ್ಲ್‌ಗೆ ಎತ್ತಿದೆ. ಮತ್ತೆ ಮರದ ಗೆಲ್ಲ್‌ಗೆ ಹತ್ತಿ ಜೇನ್ ಕೊಯ್ದ್ ಇಳ್ಸವೆ. ಜೇನ್ ಎಲ್ಲ ಕೊಯ್ದ್ ಆತ್. ಒಬ್ಬೊಬ್ಬನೇ ಮರಂದ ಇಳ್ದವೆ. ಅಂದರೆ ಆರ್ ಜನ ಮರಂದ ಇಳ್ದವೆ. ಕಡೇ ತಮ್ಮಂಗೆ ಗೆಲ್ಲ್ಂದ ಕೆಳಗೆ ಇಳಿಯಕೆ ಗೊತ್ತಾಲೆ. ಹೆಂಗೆ ಪೇಚಾಡಿರೂ ಅವಂಗೆ ಇಳಿಯಕೆ ಆದುಲೆ. ಅಣ್ಣಂದರಿಗೆ ಇಳ್ಸಕೂ ಆದುಲೆ. ಇನ್ನ್ ಏನೂ ಮಾಡಿಕೆ ಆದುಲೆತ ಅಣ್ಣಂದರ್ ಒಂದೊಂದೆ ಏಣಿನ ಬಿಚ್ಚಿವೆ. ಅವರವರ ಏಣಿಗಳ ಹೊತ್ತ್‌ಕಂಡ್ ಜೇನ್ ತಕಂಡ್ ಅವು ಆರ್ ಜನ ಮನೆಗೆ ಬಂದವೆ. ಅವ್ವ ಸುಮಾರ್ ಹೊತ್ತ್ ಕಳ್ದ ಮೇಲೆ ಕಡೇ ಮಂಜ ಬಾತ್ಲೆ ಎಲ್ಲಿ ಉಟ್ಟುತ ಕೇಳಿದೆ. ಆಗ ಅವಂಗೆ ಮರಂದ ಇಳಿಯಕೆ ಆದುಲೆ. ಹಂಗೆ ಇಳ್ಸಿಕೆ ಸುಮಾರ್ ಪೇಚಾಡ್ದೊ. ಅಂದರೂ ಆತ್ಲೆತ ಹೇಳವೆ. ಆಗ ಅವ್ವ ಗಾಬರಿಯಾಗಿ ಆಗ ಅವ ಬಾತ್ಲೆನ? ಮರಲೇ ಉಟ್ಟಾ? ಅಂತ ಕೇಳಿವೆ. ಹೌದುತ ಮಕ್ಕ ಹೇಳಿಕನ ಅವ್ವಂಗೆ ಸಂಕಟ ಆದೆ.

ಅವ್ವ ಒಂದು ಬಿಳಿ ಬಟ್ಟೆಲಿ ಒಂದು ಸೇರ್ ಅಕ್ಕಿ, ಕಾಯಿ, ಬಾಳೆಹಣ್ಣ್, ಬಾಳೆಲೆ, ನೆಣೆ ಭತ್ತಿ ಮತ್ತೆ ಒಂದು ಮ್ಯಾಪು ಇಷ್ಟ್ ಎಲ್ಲ ತಕಂಡ್ ಜೇನ್ ಕೊಯ್ದ ಮರನ ಹುಡ್ಕಿಕಂಡ್ ಹೋದವೆ. ಹೋಕನ ದೂರಕ್ಕೆ ಅವ್ವ ಅವ್ವ ಓ ಅವ್ವತ ಕರಿಯೊದು ಕೇಳ್ದೆ. ಇದರ ಕೇಳ್ದ ಅವ್ವ ಮತ್ತೆ ಚುರ್ಕು ಓಡುವೆ. ಮರದ ಬುಡಕೆ ಬಾಕನ ಮಂಜಂಗೆ ಜೇನ್ ನೆಳ ಕಚ್ಚುದು ತಡಿಯಕೆ ಆಗದೆ ಅವ್ವನ ಕರಿಯೊದು, ಮರ್ಡುದು ಮಾಡ್ತಾ ಉಟ್ಟು. ಇದರ ಕಂಡ ಅವ್ವಂಗೆ ಕರಳೇ ಕಿತ್ತಂಗಾದೆ. ಬೇಗ ಬೇಗ ತಂದ ಬಿಳಿ ಬಟ್ಟೆನ ಹಾಸಿ ಬಾಳೆಲೆ ಇಟ್ಟ್ ಅದಕೆ ಅಕ್ಕಿ, ಕಾಯಿ, ಬಾಳೆಹಣ್ಣ್ ಎಲ್ಲ ಇಸಿ ನೆಣೆ ಬತ್ತಿ ಹೋಸಿ ನನ್ನ ಕೂಸುನ ನೀನೇ ಕಾಪಾಡೊಕು. ಈ ಮರಂದ ಹೆಂಗ್ಯಾರ್ ಮಾಡಿ ನೀನೇ ಇಳ್ಸೊಕುತ ದೇವ್ರುಗೆ ಹರ್ಕೆ ಮಾಡಿಕಂಡದೆ. ಆಗ ಅಶರೀರವಾಣಿ ಕೇಳ್ದೆ. ನೀ ಬಿನ್ನೆ ಮಾಡಿಕಂಡ್ ತಿರ್ಗಿ ನಿಲ್ಲೊಕು.

ಎಷ್ಟ್ ದೊಡ್ಡ ಸಬ್ದ ಆದರೂ ಮರ ಮುರ್ದ್ ಬಿದ್ದರೂ ತಿರ್ಗಿ ನೋಡಿಕೆ ಬೊತ್ತುತ.

ಸರಿತೇಳಿ ಬೇಗ ಬೇಗ ಬಿನ್ನೆ ಮಾಡಿಕಂಡ್ ಅವ್ವ ತಿರ್ಗಿ ನಿತ್ತವೆ. ಪಂಡ್‌ನ ಕಾಲ ಎಷ್ಟ್ ಸತ್ಯದ ಕಾಲ ನೋಡಿ. ಮರ ತನ್ನಿಷ್ಟಕ್ಕೆ ಬಗ್ಗಿ ನೆಲದ ಹಕ್ಕಲೆ ಬಂದದ್. ಆ ಬಗ್ಗಿ ಬಾಕನ ಮರ ಮುರ್ದಂಗೆ ಬಾರಿ ದೊಡ್ಡ ಸದ್ದ್ ಆದೆ. ನಟ–ನಟ, ನಟ–ನಟತೇಳಿಕನೆ ಅವ್ವಂಗೆ ಹೆದ್ರಿಕೆ ಆದೆ. ಇನ್ನೂ ಒಳ್ಳ ಸದ್ದಾಕನ ಅವ್ವ ತಿರ್ಗಿ ನೋಡಿಬುಟ್ಟವೆ. ಮಂಜ ಇನ್ನೇನಿಲ್ಲೆ ನೆಲಕ್ಕೆ ಇಳ್ದ್‌ಬುಟ್ಟದೆತೇಳಿಕನ ಅಮ್ಮ ತಿರ್ಗಿ ನೋಡ್ದರ್‌ಂದ ಮರ ವಾಪಾಸ್ ನೆಟ್ಟನೆ ಆದೆ. ಮಂಞ ಮರಲೇ ಬಾಕಿ ಆತ್.

ಹೆತ್ತ ಕರುಳಿನ ನೋವು ಯಾರೊಟ್ಟಿಗೂ ಹೇಳಿಕಣಿಕೆ ಆಗದೆ ಸಂಕಟಪಡುತ್ತಾ ತಕಂಡ್ ಹೋದ ಮ್ಯಾಪುನ ಹಿಡ್ಕಂಡ್ ಮರಕ್ಕೆ ಮೂರು ಸುತ್ತು ಬಂದ್ ಮೂರು ಸರ್ತಿ ಬಾಳೆ ಮರಕ್ಕೆ ಬಡ್ದವೆ. ಬಡಿಯಕನ ಮೂರು ಸರ್ತಿ ನೀ ಆಳೆಕ್ಕಿ ಆಗಿ ಹಾರಿ ಹೋಗು ಮಂಜತ ಹೇಳಿಕಂಡ್ ಹೊಡ್ದವೆ. ಆಗ ಮಂಜ ಹಕ್ಕಿ ಆಗಿ ಬಾಳೆ ಮರಂದ ಹಾರಿ ಹೋದೆ. ಹಾರಿಹೋಕನ ಓ ಅವ್ವ... ಓ ಅವ್ವ... ಓ ಅವ್ವತ ಮರ್ಟ್‌ಕಂಡ್ ಹಾರಿ ಹೋದೆ. ಪಂಡ್‌ನ ಕಾಲದ ಸತ್ಯ ಎಷ್ಟಿತ್ತ್ ನೋಡಿ. ಪತಿವ್ರತೆಯಾಗಿ ಅವ್ವ ಹೇಳಿಕಂಕನ ಎಷ್ಟ್ ಸತ್ಯತೆ ನಡ್ದುಟುತ. ಈಗಳೂ ಅಪರೂಪಕ್ಕೆ ಆಳೆಕ್ಕಿ ಮರ್ಟದೆ. ಅದ್ ಮರ್ಡ್‌ಕನ ಎಲ್ಲಾ ಮರಗಳ ಹೆಸ್ರನ ಹೇಳೊಕು. ಆಳೆಕ್ಕಿ ಕುದ್ದ ಮರದ ಹೆಸ್ರ್ ಹೇಳಿಕನ ಅದ್ ಆ ಮರಂದ ಹಾರಿ ಹೋದೆ. ಇದ್ ಪಂಡ್‌ನ ಕಾಲಲಿ ನಡ್ದ ನಿಜವಾದ ಸತ್ಯದ ಕತೆಗಡ.

---


**ವಾರಿಜ ಎಂ.ಎನ್. ಸೂರ್ತಲೆ**
W/o ಎಸ್.ಎಸ್. ಮೋಹನ
ತಣ್ಣಿಮಾನಿ ಗ್ರಾಮ, ಭಾಗಮಂಡಲ
ಮಡಿಕೇರಿ ತಾಲ್ಲೂಕು, ಕೊಡಗು
ಮೊಬೈಲ್ : 8277402944




# ನೋಡಿಕೆ ಹೋದುಲೆನಾ?

**ಕವಿತಾ ಕಿರಣ್ ಜೈನೀರ**

ನಂಗೆ ಸಣ್ಣಂದರಲಿ ಒಂದು ವಿಷ್ಯ ತಲೇಲಿ ಕೊರೀತಾ ಇತ್ತ್. ಅದೆಂತ ತೇಳ್ರೇ ನಮ್ಮ ಹತ್ರದವ್ಕೆ ಕಾಯಿಲೆ ಕಸಾಲೆ ಬಾಕನ ಏಕೆ ನೋಡಿಕೆ ಹೋಕುತಾ? ನಾವು ನೋಡ್ರೆ ಅವು ಉಷಾರಾಗುವೆನಾತ. ಹಂಗೆ ನಾನ್ ದೊಡ್ಡವರಕ್ಕಲೆ ಕೇಳಿ ಬೈಸಿಕೊಂಡೊಳೆ. ಆಮೇಲೆ ಗೊತ್ತಾತ್ ನಾವ್ ಹೋದು ಅವ್ಕೆ ಬಲ ತುಂಬಿಕೆತಾ. ವೈಸಾದವ್ರನ್ನ ನೋಡಿ ಮಾತಾಡ್ಸಿ, ಅವ್ ಆಸೆ ಪಡೋ ಪದಾರ್ಥನ ಕೊಟ್ಟು ಕೊನೆಗಾಲಲಿ ಖುಷಿ ಪಡ್ಸಿ ಬಾದು ಒಳ್ಳೆ ಕೆಲ್ಸನೆ. ಆದರೆ ಇದ್ ಎಷ್ಟರ ಮಟ್ಟಿಗೆ ಬೆಳ್ತ್ ತೇಳ್ರೆ ಒಂದು ಶೀತ ಜ್ವರ ಬಾತ್‌ತ ಗೊತ್ತಾದರೂ ಎಂತ ಆತ್ ಮಾತಾಡ್ಸಿ ಬರೋಮೋತ ಹೋಗುವ ಮುಟ್ಟ. ಉಷಾರಿಲ್ಲೆತ ಗೊತ್ತಾಗಿನೂ ಹೋಗದಿದ್ದರೆ ಏನಾರು ತಿಳ್ಕಂಬುವತೇಳಿ ಹೋದವೆನಾತ ನಂಗೆ ಅನ್ಸಿದೆ. ಹೆತ್ತರೂ, ಸತ್ತರೂ ನೋಡಿಕೆ ಹೋಕಲ್ಲ. ಆದರೆ ಉಷಾರಿಲ್ಲದವನ ಮನೆವ್ರದ್ ಮಾತ್ರ ನಾಯಿಪಾಡ್. ಏಕೆ ತೇಳ್ರೆ ಬಂದವ್ರನ ಸುಧಾರ್ಸುದೋ ಇಲ್ಲೇ ಉಷಾರಿಲ್ಲದವ್ರನ್ನ ನೋಡಿಕೊಂಬುದೋ ನೀವೇ ಹೇಳಿ.

ಮದ್ವೆ ಆಗಿ ಸ್ವಲ್ಪ ದಿನಲೇ ನೆರೆಕರೆ ಎಲ್ಲಾ ಏನಾರ್ ಉಟ್ಟಾ? ಇನ್ನೂ ಇಲ್ಲೇನಾತಾ ಕೇಳಿಕೆ ಶುರು ಮಾಡುವೆ. ಸರಿ ವಿಶೇಷ ಉಟ್ಟುತಾ ಗೊತ್ತಾದಂಗೆ, ಬಸ್ರಿ ಮಾತಾಡ್ಸಿ ಬರ್‍ನೋತ ತಿಂಡಿ, ಹಣ್‌ಗಳ್ನ ತಕಂಡ್ ಮನೆಗೆ ಬಂದವೆ. ಒಂಬತ್ ತುಂಬಿದಂಗೆ ಹೆರ್‍ಗೆ ಆದೆಲಾ ಮತ್ತೆ ಬಾಣ್ತಿ ಮಾತಾಡ್ಸಿಕೆ ಹೋಕಲ್ಲ! ಮನೆಗೆ ಕೂಸು ಬಂದ ಖುಷಿಗಿಂತ ಬಂದವ್‌ನ ಟ್ರೀಟ್ ಮಾಡಿ ಕಳ್ಸೊಕ್ಕಲೇತಾ ಚಿಂತೆ ಮನೆವ್ಕೆ. ಯಜಮಾನ್ತಿಗಂತೂ ಬಾಣ್ತಿಗೆ ಮದ್ದು ಮಾಡೋಕು, ಕೂಸುನ ಮೀಸೋಕು, ನೆಂಟ್ರ್‌ನ ಸುಧಾರ್‍ಸೊಕು, ಅವು ಕುರಿಮಾಸ, ಕ್ವಾರ್ಟರ್ ತಂದರೆ ಅಡ್ಗೆ ಮಾಡಿ ಹಾಕೋಕು ಎಲ್ಲಾ ಸೇರಿ ಬಿ.ಪಿ. ಜಾಸ್ತಿ ಆಗಿದ್ದದೆ, ಹಂಞ ವಾಸಿಯಾದ ಮಂಡಿ ನೋವು ಓಡಾಡ್ದ್ ಜಾಸ್ತಿ ಆಕನ ನಾ ಒಳೆತೇಳ್ದೆ. ಮನೇಲಿ ಅಜ್ಜಿಕ ಇದ್ದರೆ ಪರ್ವಾಗಿಲ್ಲೆ , ಇಲ್ಲದಿದ್ದರೆ ಬಾಣ್ತಿಗೆ ಮದ್ ಮಾಡಿಕೆ ಬಂದವು ಅವ್ಕೆ

ಗೊತ್ತಿದ್ದ ಒಂದೊಂದು ಮದ್‌ಗಳ್ನನ ಹೇಳ್‌ಕಾಕನ ಯಾವ್ವುನ ಮಾಡ್ದುತ ಕನ್‌ಫ್ಯೂಸ್ ಆಗಿ ಬಾಣ್ತಿದ್ ಅಮ್ಮ ಪರ್ದಾಡ್‌ದೆ. ಇಂದ್‌ನ ಕಲ್ತ ಬಾಣ್ತಿಗ ನೆಂಟ್ರ ಬಂದ್ ಕೂಸ್‌ನ ಎತ್ತಿಕಣಿಕೆ ಬಾಕನ ಕೈಕಾಲು ತೊಳ್ಡ್ ಬನ್ನಿತಾ ಹೇಳಿಕಾಗ್ದೆ ಒದ್ದಾಡುವೆ. ಮನ್ಸ್ ಗಟ್ಟಿ ಮಾಡಿಕಂಡ್ ಹೇಳ್ರೂ ನಾವೇನು ಮಕ್ಕಳ ಸಾಕೀತೇಲೇನಾತ ಕೇಳಿಕೆ ರೆಡಿ ಇರೋಕು. ಅಂದ್ ರಾತ್ರಿ ಏನಾರ್ ಕೂಸ್ ಜಾಸ್ತಿ ಮರ್ಟರೆ ಅಜ್ಜಿಕ ಸೋಂಕು ತೆಗೆಯೋಕು ತೇಳ್ರೆ, ಬಾಣ್ತಿ ಅದ್ ಬೆಳಿಗ್ಗೆ ಬಂದ ಆಂಟಿ, ಸಂತೆಗೆ ಹೋಗಿ ಇದೇ ದಾರಿ ತಾನೇ ಬಾಣ್ತಿ ಮಾತಾಡ್ಸಿಕಂಡ್ ಪೋಯಿತಾ ಸೀದಾ ಇಲ್ಲಿಗೆ ಬಂದ್, ಕೈತೊಳಿಯದೆ ಕೂಸ್‌ನ ಎತ್ತಿಕಂಡ್ ಇನ್‌ಫೆಕ್ಷನ್ ಆತ್ ಕಂಡದೆತಾ ಗೊಣಗಿಕಂಡದೆ.

ಇನ್ನ್ ಕೈ ಕಾಲು ಮುರ್ದವ್‌ನ ನೋಡಿಕೆ ಹೋದವು, ಪೇಶೆಂಟ್‌ನ ಬೆಡ್ ಮೇಲೆನೆ ಕುದ್ದು ಇನ್ನೊಂದು ಮೂಳೆನ ಮುರ್ದು ಹಾಕೋ ಚಾನ್ಸು ಉಟ್ಟು. ಬ್ಯಾಂಡೇಜ್ ಮೇಲೆ ಎಲ್ಲಿ ಬ್ಯಾನೆ ಉಟ್ಟುತ ಮುಟ್ಟಿ ಮುಟ್ಟಿ ಕೂಡೋ ಮೂಳೆನೂ ಕೂಡಿಕಿಲ್ಲೆ. ಎಲ್ಲಿ, ಹೆಂಗೆ ಬಿದ್ದ, ಯಾವ ಏರಿಂದ ಬಿದ್ದ, ಆನೆ ಓಡ್ಸಿತಾ? ಕೊಂಬಾನೆನ ಗುನ್ನನಾ? ಆಕ್ಸಿಡೆಂಟ್ ಆಗಿದ್ದರೆ ಯಾವ ಡೈರೆಕ್ಷನ್‌ಲಿ ಬಾತ್, ಎಡಕಡೆಂದ ಬಂದ್ ಗುದ್ದಿತಾ ಬಲಗಡೆಂದ ಬಾತ, ಆಮೇಲೆ ನಿಂಗೆ ಸೊಯ ಇತ್ತಾ ಇಲ್ಲೇನಾ, ಗಾಡಿಗೆ ಇನ್ಸುರೆನ್ಸ್ ಮಾಡ್ಸಿಯೊಳ? ಹಿಂಗೆ ಪ್ರಶ್ನೆಗ ಒಂದರ ಮೇಲೆ ಒಂದು ಬುಡ್ತ ಇದ್ದಂಗೆ ಜವಾಬು ಕೊಟ್ಟ್ ಕೊಟ್ಟ್ ಪೇಶೆಂಟ್‌ಗೆ ಅರ್ಧ ಸೊಯ ಇರ್ದುಲೆ.

ಹಾರ್ಟ್ ಪೇಷೆಂಟ್‌ಗೆ ಡಾಕ್ಟ್ರ ಜಾಸ್ತಿ ಮಾತಾಡ್‌ಕಾಗದ್, ಮನ್ಸ್ ಶಾಂತಿಲಿ ಇರಿಕೇ ಬುಡೋಕುತ ಅಡ್ವೈಸ್ ಮಾಡಿದ್ದವೆ. ಆದರೆ ಆದೇ ಬೇರೆ, ಎಷ್ಟೇ ಗುಟ್ಟಾಗಿಟ್ಟರೂ ಒಬ್ಬಂಗೆ ಗೊತ್ತಾದರೆ ಆತ್, ಮತ್ತೆ ವಿಷ್ಯ ಹರಡುದೇ ಗೊತ್ತಾದುಲೆ. ನೋಡೀಕೆ ಬರೋವು ಹಾಸ್ಪಿಟಲ್‌ಗೆ ಬಂದ್ ಸೆಕ್ಯುರಿಟಿ ಕಣ್ ತಪ್ಪಿ, ಇಲ್ಲೇ ದಮ್ಮಯ್ಯ ಹಾಕಿ, ಬುಡದಿದ್ದರೇ ಕೊಟ್ಟ ಟೈಮ್‌ವರ್ಗ್ಗೆ ಕಾದ್ ಬಂದವೆ. ಬಂದ್ ಬಲ ತುಂಬಿ ಹೋದರೆ ಪರ್ವಾಗಿಲ್ಲೆ. ಕೆಲವು ಸೊಂತದವು ಬಾಕನೇ ಕಣ್ಣ್‌ಲಿ ನೀರ್ ತುಂಬಿಕಂಡ್ ಎಂತಾ ಆಬುಡ್ತ್ ಅಣ್ಣಾತೇಳಿ ಜೋರಾಗಿ ಮರ್ಟವೆ. ಪೇಶೆಂಟ್‌ದ್ ಸ್ವಲ್ಪ ಗಟ್ಟಿ ಜೀವ ಆದರೆ ಪರಾವಾಗಿಲ್ಲೆ ಇಲ್ಲದಿದ್ದರೆ ಗೋವಿಂದ. ಈ ಕಾಯ್ಲೆ ಎಲ್ಲಿಂದ ಬಂದು ಬುಡ್ತಪ್ಪ, ನಿಮ್ಮ ಅಪ್ಪಂಗಿತ್ತಾ, ಅಜ್ಜಂಗಿತ್ತಾ, ಮುತ್ತಾತಂಗಿದ್ದಿರೋಕುತೇಳಿ ವಂಶನೇ ಜಾಲಾಡ್ಸಿ ಬುಟ್ಟವೆ. ಕೆಲವು

ಜನಗ ಹೇಳ್ದು ಕೇಳೊಳೆ 'ನಾ ಹೋಗಿ ನೋಡ್‌ಕಾಕನ ಲಾಯಿಕ್‌ಲಿ ಮಾತಾಡ್ದ ಮನ್ಸ, ಮನೆಗೆ ಬಂದ್ ತಲ್ಫ್‌ಕಾಕನ ಫೋನ್ ಬಾತ್, ಹೋಗಿ ಬುಟ್ಟೋತಾ.' ಅಂದರೆ ಆ ಪೇಶೆಂಟ್ ಎಷ್ಟರ ಮಟ್ಟಿಗೆ ಡಿಸ್ಟರ್ಬ್ ಆಗಿರ್ದುತಾ ನೀವೆ ಯೋಚನೆ ಮಾಡಿ.

ಈಗ ನೀವು ಕೇಳ್ರೆ, ನೀನೇನು ನೋಡಿಕೆ ಹೋತೆ ಇಲ್ಲೆನಾತ. ನಾನೂ ನೋಡಿಕೆ ಹೋಗೊಳೆ ಕಷ್ಟಲಿ, ನಿಮ್ಮಂಗೆ ಹೋಗದಿದ್ದರೆ, ಏನಾರು ತಿಳ್ಕಂಬುವತ! ಒಮ್ಮೆ ಫ್ರೆಂಡ್‌ಗೆ ಕೂಸ್ ಆತ್ ನೋಡಿ ಬರಮೊತ ಜೊತೆವೆಲ್ಲಾ ನನ್ನಸ ಹೊರಡ್ಸಿಕಂಡ್ ಹೋದ್ದೋ. ಅಲ್ಲಿ ನೋಡ್ರೆ ಅವಳಿಗೆ ಆದ್ ಸಿಸೇರಿಯನ್. ನಮ್ಮನ್ನೆಲ್ಲಾ ಕಷ್ಟಲಿ ಮಾತಾಡ್ಸಿ ಥ್ಯಾಂಕ್ಸ್ ಹೇಳ್ತ್. ಫ್ರೆಂಡ್ಸ್ ಎಲ್ಲಾ ಜೊತೆ ಸೇರ್‌ಕಾಕನ ಗೊತ್ತಲ್ಲ ತಮಾಷೆ ಮಾಡಿಕಂಡ್ ನೆಗಾಡಿಕಂಡ್ ಇವುಕೆ ಮಾತೇ ಮುಗಿಯಲ್ಲೆ. ಬಾಣ್ತಿಗೆ ಮಾತ್ರೆದ್ ಪವರ್ ಕಮ್ಮಿ ಆಗಿ ಆಪರೇಷನ್ ಮಾಡ್ದ ನೋವು ಜಾಸ್ತಿ ಆಕನ ತುಟಿ ಕಚ್ಚಿಕಂಡ್ ಅಳು ತಡೀತಿತ್. ನಾನ್ ಪೋಯಿತೇಳ್ರೆ ಜೊತೆಯವ್ಕೆ ಕಿವಿಗೆ ಬೀಳ್ದುಲೆ. ಸ್ವಲ್ಪ ಹೊತ್ತಿಗೆ ಡಾಕ್ಟ್ರು ಬಂದು ಬುಟ್ಟೋ. ನಾವೆಲ್ಲ ಬೆಡ್‌ನ ಸುತ್ತ ಕುದ್ದಿದ್ದೋ. ಡಾಕ್ಟ್ರನ ಕಂಡಂಗೆ ಎದ್ದು ಓಡಿ ಹೋಗಿ ಬದಿಲಿ ನಿಂತುಕೊಂಡೊ. ಅವು ನುಗ್ಗಿದಂಗೆ ನಿಮ್ಮಂತ ಕಲ್ತವೇ ಹಿಂಗೆ ಮಾಡ್ರೆ ಹೆಂಗೆ ನಾವು ಆಸ್ಪತ್ರೆ ನಡ್ಸುದು, ಏನಾರ್ ತೊಂದರೆ ಆದರೆ ನಾವ್ ತಲೆಕೊಡೊಕು ನೀವಲ್ಲ. ಮತ್ತೆ ನಿಮ್ಮ ಕಡೆವು ಬಂದ್ ಆಸ್ಪತ್ರೆಗೆ ಕಲ್ಲು ಹೊಡ್ದವೆತಾ  ಬಾಯಿಗೆ ಬಂದಂಗೆ ಬೈದು ಬುಟ್ಟೋ. ನಂಗೆ ಅವಮಾನಲಿ ಅಳುನೇ ಬಂದಾಂಗಾತ್, ಮತ್ತೆ ಜೊತೆವ್ರ ಮೇಲೆ ಸಿಟ್ಟ್‌ನೂ ಬಾತ್. ಬಾಣ್ತಿದ್ ಅಮ್ಮ ಛೇ ನೋಡಿಕೆ ಬಂದ್ ಬೈಸಿಕಂಡ್ ಬುಟ್ಟೋಲಾತ ಬೇಜಾರ್ ಮಾಡಿಕಂಡೊ. ಅಂದ್‌ನ ಮೇಲೆ ನಾನ್ ಆಸ್ಪತ್ರೆಗೆ ನೋಡಿಕೆ ಹೋದು ಕಮ್ಮಿ. ಹೋದರೂ ಅಂದ್ ಕಲ್ತ ಪಾಠಕೆ, ಐದು ನಿಮಿಷಲೇ ವಾಪಾಸ್ ಬಂದ್ ಬುಟ್ನೆ.

ನೋಡಿಕೆ ಹೋದು ಪ್ರೀತಿಂದನೇ, ತಮ್ಮ ಹತ್ರದವ್ಕೆ ಏನಾರು ಆಕನ ಮನ್ಸ್ ತಡಿಯಲ್ಲೆ ಅದ್‌ಕೆ ಹೋಗಿ ಮಾತಾಡ್ಸಿ ಬಂದು ಬುಟ್ಟವೆ. ನನ್ನವೂ ಒಳ್ಳೋತ ಅವುಕೆ ಬಲನೂ ಬಂದದೆ. ಈ ಪ್ರೀತಿ ಅವುಕೆ ತೊಂದರೆ ಕೊಡುವಷ್ಟ್ ಮಟ್ಟಿಗೆ ಜಾಸ್ತಿ ಆಗದಂಗೆ ಹೋದವು ನೋಡಿಕೊಣೊಕು. ವಿಸಯ ಗೊತ್ತಾದಂಗೆ ಸುರುಗೆ ಫೋನ್ ಮಾಡಿ ವಿಚಾರ್ಸಿ ಬರಾಕಾತ

ಕೇಳಿಕಂಡರೆ ಒಳ್ಳೇದ್. ಬಾಕಾನ ಎಂತ ತರೋಕು, ಏನ್ ತಿಂದವೇತಾ ಕೇಳಿಕೊಣೊಕು. ಸುಮ್ಮನೆ ಕೇಳ್ದೆ ಬ್ರೆಡ್, ಹಣ್ಣ್ ತೊಕ್ಕೊಂಡದರೆ ತಿನ್ನದೆ ಹಾಳಾಗಿ ಎರಡ್ ದಿನ ಬುಟ್ ಕಸದ ಬುಟ್ಟಿಲಿದ್ದದೆ. ನಾ ನೋಡಿಕೋದ ಬಾಣ್ತಿಗೆ ಅವಳ ಗಂಡನ ಬ್ಯಾಚುಲರ್ ಫ್ರೆಂಡ್ಸ್ ಇಬ್ಬರ್ ಎಳನೀರ್ ತಕಂಡ್ ನೋಡಿಕೆ ಬಂದಿದ್ದೊ! ಸಾಮಾನ್ಯಕೆ ಆಸ್ಪತ್ರೆಲಿ ಇರ್‍ಾಕನ ಅವ್ಕೆ ಮನೆ ಊಟ, ಬಿಸಿ ನೀರ್ ಅವಶ್ಯಕತೆ ಇದ್ದದೆ. ಇನ್ನ್ ಕೆಲವ್ಕೆ ದುಡ್ಡುಕಾಸ್ ಸಮಸ್ಯೆ ಇದ್ದದೆ, ಅವ್ಕೆ ಕೈಲಾದ ಸಹಾಯ ಮಾಡಕ್. ಅವರ ಮಕ್ಕ ಸಾಲೆಗೆ ಹೋಕೆ ಸಹಾಯ ಮಾಡ್ದು, ಮನೆಗೆ ದಿನಸಿ ಸಾಮಾನ್ ತಂದು ಕೊಡಕ್. ಒಟ್ಟಿಗೆ ಕೆಲ್ಸ ಮಾಡುವವ್ ಆದರೆ ಅವರ ಕೆಲ್ಸನ ವಹಿಸಿಕಂಡ್ ಸಹಾಯ ಮಾಡಕ್. ಬಾಣಂತಿ ಮಾತಾಡ್ಸಿಕೆ ಎರಡ್ ತಿಂಗ ಬುಟ್ಟ್ ಹೋದರೆ ಮನೆವು ಸುಧಾರ್ಸಿಕಂಡಿದ್ದವೆ. ಕೂಸುನೂ ಸ್ವಲ್ಪ ದೊಡ್ಡದಾಗಿದ್ದದೆ.

ಕಾಲ ಎಸ್ಟ್ ತಿರ್ಗಮುರ್ಗ ಆವುಟೂ ಹೇಳಿರೆ, ಈಗ ಯಾರ್ ಯಾರ್ನ ನೋಡಿಕೆ ಹೋಗದಂತ ಪರಿಸ್ಥಿತಿ ಬಂದು ಬುಟ್ಟುಟ್ಟು. ಕೆಲವು ಆಚೆ ಈಚೆ ಹೋಕೆ ಬಾಕೆ ಆಗದೆ ಕೊರಗಿರೆ, ಇನ್ನು ಕೆಲವುಕೇ ಇದು ದೊಡ್ಡ ಉಪಕಾರನೇ. ಕೊರೋನ ಬಂದವ್‌ನ ನೋಡಿಕೆ ಯಾರು ಹೋದುಲೆ. ಹೋದವು ವಾಪಾಸು ಬಾದುಲೆತ ಹೊಸ ಗಾದೆ ಹುಟ್ಟಿಕಂಡಂಗೆ ಆಗುಟ್ಟು. ಇಂದ್ ಬನ್ನೆ ಹೇಳಿರೂ ಬಾದು ಬೇಡತ ಗಟ್ಟಿಯಾಗಿ ಹೇಳುವಸ್ಟ್ ದೈರ್ಯನ ಕೊರೋನೋ ಕೊಟ್ಟುಟ್ಟು. ಕೊರೋನಕ್ಕೆ ಥ್ಯಾಂಕ್ಸ್ ಹೇಳೋಕು ಅದ್ ಜನಕೆ ಡಿಸ್ಟೆನ್ಸ್ ಮೆಂಟೇನ್ ಮಾಡ್ದು, ಮಾಸ್ಕ್ ಹಾಕುದು, ಕೈ ತೊಳೆಯುದು ಎಲ್ಲಾ ಕಲ್ಸಿ ಕೊಟ್ಟುಟಲ್ಲ. ನೋಡ್ನೋ ಈ ಡಿಸ್ಟೆನ್ಸ್ ಮೆಂಟೇನ್ ಎಷ್ಟ್ ಎಫೆಕ್ಟ್ ಆಗುಟ್ಟುತ ಮದ್ವೆಗಳಲಿ ಗೊತ್ತಾದೆ. ಹೊರ ದೇಶಗಳಲ್ಲಿ ಉಗ್ದರೆ ದಂಡ ಹಾಕುವಂಗೆ, ನಮ್ಮ ದೇಶಲೂ ಕಾನೂನು ಮಾಡ್‌ಕಾಕನ ಇನ್ ಎಲೆ ಅಡಿಕೆ ತಿಂದ್ ಲಾಯಿಕ್‌ಲಿ ಉಗಿಯೋ ಖುಷಿನೂ ಇಲ್ಲೆಲ್ಲಪ್ಪ ಎಂಥ ಕಲಿಕಾಲ ಬಾತ್‌ತ ಹಿರಿಯವು ಗೊಣಿಗಿಕಂಡಿರುವೊ ಏನೋ. ನಾವೆಲ್ಲಾ ಈ ಸುಡ್ಗಾಡ್ ಮನಾರ ಇಲ್ಲದೆ ಇಸ್ಟ್ ದಿನ ಬದ್ಕಿತೇಲೆನಾತ ಹೇಳುವಂಗೂ ಇಲ್ಲೆ.

ಕೊರೊನ ಜನಕ್ಕೆ ಆರೋಗ್ಯದ ಬಗ್ಗೆ ಕಾಳಜಿ ತಕಣಿಕೆ ಕಲ್ಸುಟ್ಟುತೇಳಿಕೆ ಒಂದು ಉದಾರಣೆ ಕೊಟ್ನೆ, ನಮ್ಮ ಮನೆ ಹಕ್ಕಲೆ ವರ್ಷಪೂರ್ತಿ ಕೆಮ್ಮಿಕಂಡಿರ್ತಿದ್ದ ತಾತ ಮದ್ದು ತಕಣಿತ ಹೇಳ್ಕನ ಅದ್ ಒಮ್ಮೆಲೇ

ಹೋದುತ ಉದಾಸೀನಲಿ ಹೇಳ್ತಿದ್ದೊ. ಆದರೆ ಲಾಕ್‌ಡೌನ್ ಟೈಮ್‌ಲಿ ಸದ್ದೇ ಇತ್ಲೆ. ನಾವೆಲ್ಲ ಯಾಕೋ ತಾತನ ಕರ್ಕೊಂಡೋದ ಕಂಡದೆತ, ಆ ಕಡೆ ಹೋತ್‌ಲೆ. ಮೊನ್ನೆ ಗುಡಿ ಕಡೆ ಹೋತಿದ್ದವ್‌ನ ಮಾತಾಡ್ಸ್‌ಕಾಕನ ಅವರ ಕೆಮ್ಮುಲೆ ವಾಸಿ ಆಗಿಬುಟ್ಟುಟು. ಕೊರೋನಕ್ಕೆ ಹೆದ್ರಿ ನಿಮ್ಮ ಕೆಮ್ಮುಲು ಓಡಿ ಬುಟ್ಟುಟಲ್ಲತ ತಮಾಷೆ ಮಾಡ್ದೊ. ಆಗ ಅವು ಹೇಳ್ದೊ ಹೌದು ಕೊರೋನ ಬಂದವ್‌ನ ಪರ್ದೇಶಿಗಳಂಗೆ ಎತ್ತಕಾಂಡ್ ಹೋದ್ ನೋಡಿ ನನ್ನಂದಾಗಿ ಮನೆಯವ್‌ಕೂ ತೊಂದರೆ ಆಕಾಗದ್‌ತೇಳಿ ಕಷಾಯ ಗಿಷಾಯ ಮಾಡಿ ಕುಡ್ದುಬುಟ್ಟೆತ ಹೇಳ್ದೊ. ಈ ಕೆಲ್ಸ ಮೊದ್ಲೆ ಮಾಡಿದ್ದರೆ ನಿಮ್ಮ ಕೆಮ್ಮು ಸದ್ದ್ ಇಲ್ಲದೆ ನಾವ್ ಲಾಯಿಕ್‌ಲಿ ನಿದ್ದೆನಾರು ಮಾಡ್ತಿದ್ದೊಲ್ಲತ ಕಿಚಾಯ್ಸಿದೊ.

ಮದ್ವೆ ಮನೆಲಿ ನಂಗೆ ಕೆಲವ್ ಸಲ ಕಷ್ಟ ಆತಿದ್ದ ವಿಷ್ಯತೇಳ್ರೆ ಊಟಕ್ಕೆತ ಕೈ ತೊಳ್ದು ಬಾಕಾಕನೇ ಹಿರಿಯವು ಇಲ್ಲೇ ನೆಂಟ್ರ್‌ಗ ಮಾತಾಡಿಕೆ ಸಿಕ್ಕಿ ಬುಡ್ದು. ಬೇರೆ ದಾರಿ ಕಾಂಬದೆ ಒಂದೋ ಕಾಲು ಹಿಡಿಯೋಕು. ಇಲ್ಲೇ ಕೈ ಕುಲುಕೋಕು. ಇನ್ನೆಂತ ಮಾಡ್ದು ಪುನ ಕೈತೊಳಿಯಕೆ ಯಾರ್ ಹೋದುತ ಬಟ್ಟೇಲೇ ಕೈ ಒರ್ಸಿಕಂಡ್ ಎಷ್ಟೋ ಸಲ ಊಟ ಮಾಡಿಯೊಳೆ. ಸದ್ಯ ಈಗ ನಮಸ್ತೆ ಮಾಡಕಲ್ಲ ಆ ತೊಂದರೆಗೆ ಮುಕ್ತಿ ಸಿಕ್ಕುಟು. ಅಜ್ಜಿಕ ಅವಂಗೆ ಭಾರೀ ಗತ್ತ್ ಕಾಲೇ ಹಿಡಿಯಲೇ ಅಂತ ಚೊರೆ ಮಾಡ್ತಿದ್ದವು, ಯಾರಾರ್ ಕಾಲ್ ಹಿಡಿಯಕೆ ಬಾಕನ ದಮ್ಮಯ್ಯ ಬೇಡ ಹೇಳಿ ನಮಸ್ಕಾರ ತಕಣ್‌ದು ನೋಡಿಕಾಕನ ಜಾಗ್ರತೆ ಉಟ್ಟಲ ಅಜ್ಜಿಗೆ ಅಂತ ನಗೆ ಬಂದರೂ, ಅದರೊಟ್ಟಿಗೆ ಆಶೀರ್ವಾದ ತಕೋಣೋ ಒಳ್ಳೇ ಸಂಸ್ಕಾರನ ಸದ್ಯದ ಮಟ್ಟಿಗೆ ಬುಡೋಕಲ್ಲಾತ ಬೇಜಾರು ಆದೆ. ಐಮರಲಿ ಕೈಕಾಲು ತೊಳೆವ ಚೊಂಬುನ ಬದ್ಲ್ ಸ್ಯಾನಿಟೈಸರ್ ಬಂದ್ ಕುದ್ದದ್ ನೋಡ್ಕಾಕನ ಹಿಂಗಾದರ್ ನಮ್ಮ ದೇಶದ ಜನ ಮಡಿಮನಾರನ ಒಪ್ಪಿಕೊಂಡೋಳಲಾ ಅಷ್ಟೇ ಸಾಕ್‌ತ ಅನ್ಸಿದೆ.

---

**ಕವಿತಾ ಕಿರಣ್ ಜೈನೀರ**
ಆಶೀರ್ವಾದ ನಿಲಯ, ಬಿಎಸ್.ಎನ್.ಎಲ್ ಕ್ವಾಟ್ರಸ್ ಎದುರು, ರಾಧಕೃಷ್ಣ ಬಡಾವಣೆ,
ಗೌಡ ಸಮಾಜ ರಸ್ತೆ, ಕುಶಾಲನಗರ., ಸೋಮವಾರಪೇಟೆ ತಾಲೂಕು,
ಕೊಡಗು ಜಿಲ್ಲೆ – 571234 ಮೊ.ಸಂಖ್ಯೆ : 8105531615

# ರೊಟ್ಟಿ ಸುಟ್ಟಾತ್

## ಲೀಲಾ ದಾಮೋದರ

ತಲೆಬರ ನೋಡ್ದ ಕೂಡ್ಲೇ ಏನಪ್ಪಾ ಈ ಹೆಳ್ಮಕ್ಕಳಿಗೆ ಅಡ್ಗೆ, ಅಡ್ಗೆಕೋಣೆ ಬುಟ್ಟರೆ ಬೇರೆ ವಿಷ್ಯನೇ ಸಿಕ್ಕುದುಲೆ ಪ್ರಬಂಧ ಬರಿಯಕೆತ ಅನ್ಸಿಕೂ ಸಾಕ್. ಪದ್ಯ, ಕತೆ, ಕಾದಂಬರಿ ಏನ್ ಬರ್ದ್ದೊರೂ ಅದ್ ಅಡ್ಗೆಕೋಣೆ ಸುತ್ತ ಸುತ್ತಿಕಂಡ್ ಇದ್ದದೆಲೆತ ಹಗ್‌ರ ಆಗಿ ಕಾಂಬೊಡಿ. ಅಡ್ಗೆ, ಊಟ ಅಂತ ಹಗ್‌ರ ಸಂಗ್‌ತಿಗ ಅಲ್ಲ. ದೇಶ ಆಳ್ವ ಅರ್‌ಸು ಆಗಲಿ, ಗದ್ದೆ ಹೂಡುವ ಐತ ಆಗಲಿ ಹೊಟ್ಟೆಗೆ ತಿನದೆ ಕೆಲ್ಸ ಮಾಡಿಕೆ ಆದ್‌ಲೆ. ಮೊನ್ಸರೇ ಆಗಲಿ, ಪ್ರಾಣಿಗಳೇ ಆಗಲಿ ಬೊದ್ಕೊಕೊರೆ ಊಟ ಬೇಕೇ ಬೇಕು. ಜುಟ್ಟುಗೆ ಮೊಲ್ಲಿಗೆ ಇಲ್ಲದ್ದರೂ ನಡ್ದದೆ, ಆದರೆ ಹೊಟ್ಟೆಗೆ ಹಿಟ್ಟ್ ಇಲ್ಲದಿದ್ದರೆ ಕೈಕಾಲ ಆಡ್ದ್ಲೆ. ರಾಜ ಮಾರಾಜಂಗಳಿಗೆ ಜನ್ಮ ಕೊಡುವ ಅವ್ವ ಹೇಂಗೆ ಕಮ್ಮಿ ಅಲ್ಲನೋ ಹಾಂಗೆ ಎಲ್ಲವರ ಹೊಟ್ಟೆ ತುಂಬುಸಿ ಸಾಧನೆ – ಬೋಧನೆ ಮಾಡೊವುಕೆ ಶಕ್ತಿ ಕೊಡುವ ಅಡ್ಗೆ, ಅಡ್ಗೆ ಒಳೆಗೆ, ಅಡ್ಗೆ ಮಾಡೊವು ಕಳಪೆ ಅಲ್ಲ. ಆಹಾರವಸ್ತುಗಳ ದುಡ್ಡು ಸಂಪಾದುಸುದು ಎಷ್ಟ್ ಮುಕ್ಯನೋ, ಅದರ ಜೋಪಾನ ಮಾಡಿ, ಮನಾರ ಮಾಡಿ, ಸಂದರ್ಬಕ್ಕೆ ತಕ್ಕ ಹಾಂಗೆ ಕಾಸಿ, ಬೇಸಿ ಇಕ್ಕುದು ಕೂಡಾ ಅಷ್ಟೇ ಮುಕ್ಯ.

ಈಗ ನಾ ಹೇಳಿಕೆ ಹೊರ್ಟದ್ ನಮ್ಮ ಕಡೆನ ಒಂದು ತಿಂಡಿನ ಸಂಗ್‌ತಿ. ನಾವು ಸುಳ್ಯಕೆ ಬಂದ ಸುರುಲಿ ಬೊಳ್ಪುನ ಕಾಪಿಗೆ ತಿಂಡಿ ಎಂತದ್‌ತ ಯಾರ್ನ ಕೇಳ್ರೂ ರೊಟ್ಟಿತೇಳ್ತಿದ್ದೊ. ಇದೇನಪ್ಪ? ಕೊಡ್ಗುಲಿ ರೊಟ್ಟಿ ಮಾಮೂಲು. ಕನ್ನಡ ಜಿಲ್ಲೆಗೂ ರೊಟ್ಟಿ ಬಂದ್‌ಬುಡ್ತಾ ಹಾಂಗಾರೆ? ನೀರ್‌ದೋಸೆ, ಓಡಿಟ್ಟ್, ಪುಂಡಿ ಎಲ್ಲ ಎಲ್ಲಿಗೆ ಹೋದೋತ ನೆನ್ಸಿರೆ ಮತ್ತೆ ಗೊತ್ತಾತ್ ಅದ್ 'ಬೊಡ್ರೊಟ್ಟಿ'ತ. ಬೊಡ್ಡು ಬೊಡ್ಡಾಗಿ, ಒಡ್ಡು ಒಡ್ಡಾಗಿ ಮೆತ್ತಿದ ರೊಟ್ಟಿ ಇದ್ ಆಗಿರೊಕುತ ನೀವು ತಿಳ್ದರೆ ಮತ್ತೆ ಹೆಡ್ಡ್‌ಗೆ ಬಿದ್ದಂತೆ ಲೆಕ್ಕ. ಇದ್ ಮೆತ್ತುವ ರೊಟ್ಟಿ ಅಲ್ಲ ಮಾರ್ರೆ. ಇದ್ ಹೊಯ್ವ ರೊಟ್ಟಿ, ದೋಸೆನಾಂಗೆ. ಆದರೆ ದೋಸೆನಸ್ಟ್ ಮೆತ್ತಂಗೆ ಅಲ್ಲ; ರೊಟ್ಟಿನಷ್ಟ್ ಗಟ್ಟಿನೂ ಅಲ್ಲ. ಹಲ್ಲ್ ಇರೊವ್ಕೂ, ಇಲ್ಲದೊವ್ಕೂ ಸುಕಲಿ ತಿಂಬಕೆ ಆವ ತಿಂಡಿ ಇದ್.

ಕತ್ತಲೆಗೆ ಬೆಣ್ತೆಕ್ಕಿನ ಪದ್‌ನಿಕೆ ಹಾಕಿ, ಮಾಣ್ದಿನ ಬೊಳ್ಪಿಗೆ ಬೇಕಷ್ಟ್ ಹುಗ್ಗೆ ಹಾಕಿ, ಉಪ್ಪು ಸೇರ್ಸಿ ಕಡ್ದ್, ಇಡ್ಲಿ ಬಂದದ ಹದಲಿ ಇರ್‌ವ ಇದರ ಒಂದು

ದೊಡ್ಡ ಸೆಡೆ ತುಂಬಾ ಗೋಂಚಿಕಾದ ಬಳದ ಕಾವ್‌ಲಿ ಮೇಲೆ ಹೊಯ್ದ್ ಅಗಲಕ್ಕೆ ಹಂರ್ಡಿ, ಒಂದು ಬಾವಡೆ ಮುಚ್ಚಿ, ಆಚೆ ಗೈಪುಗೆ ಕಡಿಯಕೆ ಜೋಡ್ಸುದೋ, ಕಾಯಿ ಹೆರಿದೋ ಮಾಡ್‌ಕನ ಇತ್ತ ಬೊಡ್ರೊಟ್ಟಿ ಹದಲಿ ಬೆಂದದೆ. ಅದರ ಎಳ್ಕ್‌ಸಿ, ಇನ್ನೊಂದು ರೊಟ್ಟಿ ಹೊಯ್ದ್, ಮತ್ತೆ ಏನೋ ಹಂಞ ಕೆಲ್ಸ ಮಾಡ್‌ಕನ ಈ ರೊಟ್ಟಿನೂ ಬೆಂದದೆ. 'ಅವಸರವೂ ಸಾವಧಾನದ ಬೆನ್ನೇರಿ...'ತ ಹೇಳಿವೆ ಅಲ್ಲ, ಅದ್ ಈ ಬೊಡ್ರೊಟ್ಟಿನ ವಿಸ್ಯಲಿ ಸತ್ಯ. ಬೊಳ್ಪುನ ಕೆಲ್ಸದ ಗಡಿಬಿಡಿ ಎಷ್ಟ್ ಇದ್ದೊರೂ ಬೊಡ್ರೊಟ್ರಿಗೆ ಕೊಡುವ ಸಮೆ ಕೊಡೊಕೇ.

ಬೊಡ್ರೊಟ್ಟಿನ ಬಿಸಿಬಿಸಿ ತಿಂದರೇ ಲಾಯ್ಕ್. ಪೊಜ್ಜಿ ಕಡ್ತ್‌ಲೆ, ಗೈಪು ಮಾಡ್ತ್‌ಲೆತೇ ಇಸಿಕಣೆ ತುಪ್ಪದ ಬರ್ಣಿಂದ ಎರ್ಡ್ ಮಿಳ್ಳೆ ತುಪ್ಪ ತೆಗ್ದ್ ಬಿಸಿ ಬಿಸಿ ಬೊಡ್ರೊಟ್ಟಿನ ಮೇಲೆ ಹಾಕಿ ತಿಂದ್ ನೋಡಿ, ಇಲ್ಲೆ ಒಂದು ನಿಂಬುಳಿನಷ್ಟ್ ದೊಡ್ಡ ಬೆಣ್ಣೆ ಮುದ್ದೆನ ಪೂಜಿ ತಿನಿ. ಅದ್ ಕೊಡುವ ಸ್ವಾದಕ್ಕೆ ನೀವು ಮಾರ್‌ಹೋಗದೆ ಇರಿಕಿಲೆ. ಅಕ್ಕಿ-ಬಂದ-ಹಿಟ್ಟ್‌ನ ಮೂಲ ಪೊರಿಮಳಕ್ಕೆ ಇಷ್ಟೇ ಇಷ್ಟ್ ತುಪ್ಪದ / ಬೆಣ್ಣೆನ ಪೊರಿಮಳ ಸೇರಿ, ಟಿವಿ ಕಾರ್ಯಕ್ರಮಲಿ ಸಿಹಿಕಹಿ ಚಂದ್ರು ಅಡ್ಗೆ ಮಾಡಿ ತಿಂದ್ 'ಊಹೂಹೂ...'ತ ಉದ್ಗಾರ ತೆಗ್ದವೆಲಿ ಆ ರೀತಿ ಚಪ್ಪುರ್ಸುವ ಹಾಂಗೆ ಆದ್ದೆ! ಒಳ್ಳ ಕಾಯಿಪೊಜ್ಜಿ ಬೊಡ್ರೊಟ್ಟಿಗೆ ಹೊಂದಿಕಂಡದೆ. ಕೋಳಿಗೈಪೊಟ್ಟಿಗೆ, ಮೀನ್ ಆಂಬರದೊಟ್ಟಿಗೆ ತಿಂಬ ಗಮ್ಮತ್ತೇ ಬೇರೆ.

'ರೊಟ್ಟಿಗೆ ಬುಟ್ಟ ಹಿಟ್ಟ್ ಇಲ್ಲೆ, ಅಳಿಯಂಗೆ ಬುಟ್ಟ ನಂಟ ಇಲ್ಲೆ'ತೇಳ್ದು ರೂಢಿಲಿ ಬಂದ ಮಾತ್. ಆದರೆ ಈ ರೊಟ್ಟಿ ಬೊಡ್ರೊಟ್ಟಿ ಅಲ್ಲ, ಅದ್ ನಮ್ಮ ಪೊಕ್ಕುಳ ರೊಟ್ಟಿ.

ನಾವು ಸಣ್ಣೊವು ಇರ್‌ಕನ ಮನೆಗೆ ನಂಟ್ರ್ ಬಂದರೆ ಗಮ್ಮತ್ತು ಕೋಳಿಗೈಪು ರೊಟ್ಟಿತೇ ಲೆಕ್ಕ. ಬೆಂಡ್ ಕುಕ್ಕೆಲಿ ಅಕ್ಕಿ ಹಾಕಿ ತೊಳ್ದ್ ನೀರ್ ಅರಿಯಕೆ ಬುಡ್ತಿದ್ದೊ. ನೊಡು ನೊಡುಲಿ ಒಂದೆರ್ಡ್ ಸರ್ತಿ ಬೆಂಡ್ ಕುಕ್ಕೆನ ಆಚೆ ಈಚೆ ತಿರ್ಗ್‌ಸಿ ಪಸೆ ಆರುವಾಂಗೆ ಮಾಡ್ತಿದ್ದೊ. ಮತ್ತೆ ರಾಗಿಕಲ್ಲ್ ಹೂಡಿ ಇಷ್ಟ್ ಇಷ್ಟೇ ಅಕ್ಕಿನ ಗುಳಿ ಒಳೆಗೆ ಹಾಕಿ ಬೀಸಿ ಹೊಡಿ ಮಾಡ್ತಿದ್ದೊ. ಕಡೇಲಿ ಅದಕೆ ಬೇಕಾಗುವಷ್ಟ್ ಹೊರ್ದ ಕೊಸ್ಲೆಕ್ಕಿನ ಹಾಕಿ ಬೀಸ್‌ತಿದ್ದೊ. ಆಗ ಅದರ ಘಮ ಸುತ್ತೊಳು ಹಂರ್ಡಿ ರೊಟ್ಟಿ ಮಾಡಿವೆತೇಳ್ದು ಎಲ್ಲೊವ್ಕೂ ಗೊತ್ತಾತಿತ್ತ್. ಒಲೆ ಮೇಲೆ ಕೊದ್ದ್‌ಕಂಡ್ ಇರುವ ಬಿಸಿ ನೀರ್‌ನ ಹಂಞ ಹಂಞ ಈ ಅಕ್ಕಿ ಹೊಡಿಗೆ ಹಾಕಿ, ಮರದ ಕೋಲುಲಿ ತಿರ್ಗ್‌ಸಿ ರೊಟ್ಟಿಗೆ ಕಲ್ಸ್‌ತಿದ್ದೊ. ಅತ್ತ ಎಳ್ತೂ ಅಲ್ಲದ ಇತ್ತ ಬೆಳ್ದದೂ ಅಲ್ಲದ ಬಾಳೆ ಕೀಂತ್‌ಗಳ ತಂದ್ ಬಾಡ್ಸಿ ಅದರ ಮೇಲೆ ರೊಟ್ಟಿ ಮೆತ್ತಿ ಮೊಣ್ಣುನ ಓಡುಲಿ ಬೇಸಿ

ಕೆಂಡಕ್ಕೆ ಹಾಕ್‌ಕನ ಬುಗ್ಗತ ಗುಳ್ಳೆ ಬಾತಿತ್ತ್. ಇಂತ ಪೊಕ್ಕುಳ ರೊಟ್ಟಿಗೆ ಯಾವ ತಿನಿ ಸಮ ಆದು ಹೇಳಿ?

ಈಗ ಈ ರೀತಿ ರೊಟ್ಟಿ ಮಾಡಿವೆ, ಇಲ್ಲರೆ ಬಿಸಿ ನೀರ್ ಕೊದಿಯಕನ ಅದ್ಕೆ ಅಕ್ಕಿ ಹೊಡಿ ಹಾಕಿ ಮೊಗ್ಚಿ ಚೆಣೆಯಕನ ಇನ್ನೂ ಹಂಞ ಹೊಡಿ ಹಾಕಿ ಕಲ್ಸಿ ರೊಟ್ಟಿ ತಟ್ಟಿವೆ. ಯಾವ ರೀತಿ ಮಾಡ್ರೂ ರೊಟ್ಟಿ ರೊಟ್ಟಿನೇ. ಹೆಸ್‌ರ್‌ಲಿ ರೊಟ್ಟಿತೇಳ್ವ, ಪದ ಸೇರ್ಸಿಕಂಡ ಯಾವ ತಿಂಡಿಗೂ ನಮ್ಮ ಪೊಕ್ಕುಳ ರೊಟ್ಟಿನ ಮೀರ್ಸಿಕೆ ಆಕಿಲೆ.

ರೊಟ್ಟಿ ಬಗ್ಗೆ ಬರಿಯಕನ ನಮ್ಮ ವಾರ್ಡನ್ ಅವ್ವ – ಚೆಟ್ಟಿಮಾಡ ಅಮ್ಮವ್ವ ನೆನ್ಪಾದವೆ. ನಾವು ಡಿಗ್ರಿ ಓದ್‌ಕನ ಕಡೆ ವರ್ಷಕಾಕನ ನಮ್ಮ ಹಾಸ್ಟೆಲ್ ಮುಚ್ಚಿದೊ. ನಾವು ನಾಲ್ಕೈದ್ ಜನ ವಾರ್ಡನ್ ಅವ್ವನ ಮನೆಲಿ ಇದ್ದ್‌ಕಂಡ್ ಒಂದು ವೊರ್ಸ ಓದಿದೊ. ಐತ್ವಾರ ರಜೆ ದಿನ ನಾವುಗೆ ಅಡ್ಗೆ ಮಾಡಿಕೆ ಹೇಳ್ತಿದ್ದೊ ಅವ್ವ. ನಾವೂ ಬಾರೀ ಕುಸಿಲಿ ಅಡ್ಗೆ ಮಾಡ್ತಿದ್ದೊ. ಕೆಂಡದ ಒಲೆ ಮುಂದೆ ಕುದ್ದ್‌ಕಂಡ್ ರೊಟ್ಟಿ ಕಾಸ್ಕನ, ದೋಸೆ ಹೊಯ್ಯಕನ ವಾರ್ಡನ್ ಅವ್ವ ಪದ್ಯ ಹೇಳ್ತಿದ್ದೊ,

'ರೊಟ್ಟಿ ಸುಟ್ಟಾತ್...

ಮಗಳ ಕೆನ್ನೆ ಕೆಂಪಾತ್'

ಅವ್ವನ ಈ ಪದ್ಯದೊಟ್ಟಿಗೆ ಅಲ್ಲಿ ನನ್ನೊಟ್ಟಿಗೆ ಓದಿಕಂಡ್, ರೊಟ್ಟಿ ಸುಟ್ಟ್‌ಕಂಡ್, ಕೆನ್ನೆ ಕೆಂಪು ಮಾಡಿಕಂಡ್ ಇದ್ದ ಶಾರದ, ಲಲಿತ, ರೋಹಿಣಿ ಅಕ್ಕ, ಲಕ್ಷ್ಮಿ ಅಕ್ಕ, ಅಂಬ, ಸೋಮಣ್ಣ, ರಘು ಅಣ್ಣ, ಬೋಜಿ ಎಲ್ಲವರ ನೆನ್ಪೂ ದಿಬ್ಬಣ ಹೊರ್ಟದೆ.

ಇಂದ್ ರೊಟ್ಟಿ ಮಾಡ್ವ ಅಭ್ಯಾಸ ನಮ್ಮ ಕಡೆ ಹಂಞ ಕಮ್ಮಿನೇ. ರೊಟ್ಟಿನ ಜಾಗೆನ ಸದ್ದ್ ಮಳಡದೆ ಬೊಡ್ರೊಟ್ಟಿ ಆಕ್ರಮಿಸಿಕಂಡುಟು. ಅದ್ಕೆ ಕಾರಣನೂ ಉಟ್ಟುತೇಳೊನೊ. ರೊಟ್ಟಿ ಮಾಡಿಕೆ ಹಂಞ ಅಭ್ಯಾಸ ಬೇಕು, ನೈಪುಣ್ಯ ಬೇಕು. ಬೊಡ್ರೊಟ್ಟಿ ಹಾಂಗಲ್ಲ ಅದರ ಮಾಡ್ದು ಸುಲ್ಬ. ಎಣ್ಣೆ ಬೇಕಾಗದ ಆರೋಗ್ಯಕರ ತಿಂಡಿನೂ ಹೌದು. ರುಚಿಗೆ ರುಚಿನೂ ಉಟ್ಟು. ಅದ್ಕೆ ಅದರ್ದೇ ಆದ ಮೊರ್ಯಾದಿ ಉಟ್ಟು. ಅದ್ ಪೊಕ್ಕುಳ ರೊಟ್ಟಿಗೆ ಪರ್ಯಾಯ ಕೂಡಾ ಹೌದು. ಆದೊರೂ ಅದ್ ಬೊಡ್ರೊಟ್ಟಿ! ಇದ್ ರೊಟ್ಟಿ!! ರೊಟ್ಟಿ ರೊಟ್ಟಿನೇ, ಬೊಡ್ರೊಟ್ಟಿ ಬೊಡ್ರೊಟ್ಟಿನೇ!

---

**ಲೀಲಾ ದಾಮೋದರ ಕುಂದಲ್ಪಾಡಿ**
'ಧಾತ್ರಿ', ಗಾಂಧಿನಗರ, ಸುಳ್ಯ, ದಕ್ಷಿಣ ಕನ್ನಡ
ಮೊಬೈಲ್ : 9449451051

# ಬನ್ನಿ ಓದೋಮ

ಶ್ರೀ ಕೃಷ್ಣ ಆಲನಹಳ್ಳಿ ಕನ್ನಡದ ಒಬ್ಬ ಮಹತ್ವದ ಕತೆಗಾರ, ಕಾದಂಬರಿಕಾರ, ಕವಿ. ಕನ್ನಡ ಸಾಹಿತ್ಯಲೋಕಕ್ಕೆ ಇವರ ಸೇವೆ ದೊಡ್ಡದ್. ನಡುವಯಿಸ್ಸಿಲೇ ಇವು ತೀರಿಕಂಡ್ಡದ್ ಕನ್ನಡ ಸಾಹಿತ್ಯಲೋಕಕ್ಕೆ ತುಂಬಿಕಾಗದ ನಷ್ಟ. ಇವರ ಕಾದಂಬರಿಗ ಚಲನಚಿತ್ರಗಳಾಗಿನೂ ಹೆಸರು ಮಾಡಿಟು. ಹೆಚ್ಚಾಗಿ ಇವು ಮನುಷ್ಯಕೇಂದ್ರಿತ ವಿಸಯಗಳ ಬಗೆನೇ ಬರ್ದವೆ. ಹಳ್ಳಿಯ ಪರಿಸರಲಿ ಹುಟ್ಟುವ ಇಲ್ಲಿನ ಹೆಚ್ಚಿನ ಕತೆಗ ಮನುಷ್ಯ ಸ್ವಭಾವದ ಸಂಕೀರ್ಣತೆಗ, ಹಳ್ಳಿಗ ನಗರಗಳಾಗುವ ಬಿಕ್ಕಟ್‌ಗಳ, ಭವಿಸ್ಯದ ಹೊಣೆಗಾರಿಕೆಯಿಲ್ಲದೆ, ವಾಸ್ತವದ ಬದುಕಷ್ಟೇ ನಂಬಿಕಂಡ ಮೊನ್ಸರ್‌ಂದ ಪರಿಸರದ ಮೇಲಾಗುವ ಅಡ್ಡ ಪರಿಣಾಮಗ, ಇದೆಲ್ಲನ ಕೂಡ ಇವರ ಕತೆಗ ಸರಳವಾಗಿ ಮನಸಿಗೆ ನಾಟುವಂಗೆ ಹೇಳಿದೆ. ಅವರ 'ಗೋಡೆ' ಕಥಾಸಂಕಲನಂದ ತೆಕಂಡ 'ಮಾಮರವೂ ಮಾಪಿಳ್ಳೆ' ಕತೆನ ಒಂದ್ ತುಣುಕುನ ನಿಮ್ಮ ಮುಂದೆ ಇಟ್ಟೊಳೊ. ಆದರ್ಶ ಮತ್ತೆ ವಾಸ್ತವ ಹೆಂಗೆ ಭಿನ್ನ ಭಿನ್ನ ಆಗಿದ್ದದೆ ಅಂತ ಹೇಳುದರ್ನ, ಒಬ್ಬನ ಆದರ್ಶಂದ ಊರು ಬದಲಾದುಲೆ ಹೇಳುವ ಸತ್ಯನ, ಆದರ್ಶ ಬುಟ್ಟು ಅವರೊಳಗೆ ಒಂದಾಗಿ, ಹೊಂದಿಕಂಡ್ಹೋಗಿ ವಿನಾಸನ ಕಣ್ಣ ಮುಂದೆ ನೋಡುವ ಅಸಹಾಯಕತೆನ ತೋರ್ಸುವ ಚಿತ್ರ ಇಲ್ಲಿಟ್ಟು. ಫಲ ಕೊಡುವ ಮರಗ ಹೇಂಗೆ ನಾಸ ಆಗಿ ನಮ್ಮ ಮನೆಯ ಬಾಗ್ಲ್, ಕಿಡ್ಕಿ, ಜಂತಿಗಳಿಗೆ ಅಂಟಿಕೊಂಡುಟು ಹೇಳುದರ್ನ ಗ್ರೇಸಿಕಾಕನ, ನಮ್ಮಲ್ಲಿ ಅದು ಒಂದು ರೀತಿನ ಕಸಿವಿಸಿನ ಉಂಟು ಮಾಡಿರೆ ಈ ಓದು ಸಾರ್ಥಕ..ಗೋಡೆ ನೀವು ಒಮ್ಮೆ ಓದಿ.

## ಮಾಮರವೂ ಮಾಪಿಳ್ಳೆಯೂ

ತೋಟದಲ್ಲಿ ಸಣ್ಣದೊಂದು ಮನೆ ಕಟ್ಟಿಸಲು ತೊಡಗಿದ ನನಗೆ ಅದಕ್ಕೆ ಬೇಕಿದ್ದ ಮರಮಟ್ಟುಗಳನ್ನು ಅಣಿ ಮಾಡುವುದರೊಳಗೆ ಸಾಕು ಸಾಕಾಯಿತು. ಒಂದು ಕಾಲಕ್ಕೆ ಕಗ್ಗಾಡಿಗೆ ಅಂಟಿಕೊಂಡಿದ್ದ ನನ್ನೂರಿನಲ್ಲಿ ವಾಸದ ಮನೆಗಳಿರಲಿ ದನದ ಕೊಟ್ಟಿಗೆಗಳನ್ನೂ ತೇಗ, ಹೊನ್ನೆ ಇಲ್ಲ ನಂದಿ ಮರಗಳನ್ನು ಕಡಿದು ತಂದು ಕಟ್ಟುತ್ತಿದ್ದುದನ್ನು ನಾನೇ

ಕಣ್ಣಾರೆ ಕಂಡಿದ್ದೆ. ಈಗ ಅಂಥ ಜಾತಿಯ ಮರಗಳಿರಲಿ ಮೂರು ದಿನಕ್ಕೆ ಗೆಜ್ಜಲು ಹುಳಗಳು ಧ್ವಂಸ ಮಾಡಿಬಿಡುವ ಕಾಡುಮರಗಳಿಗೂ ದರಿದ್ರ ಬಡಿದಿತ್ತು. ನನ್ನ ವಾರಿಗೆಯವನೇ ಆದ ಗಾಣಿಗರ ರಾಜ ತನ್ನ ಕುಲಕಸುಬಾದ ಗಾಣ ಆಡಿಸಿ ಎಣ್ಣೆ ತೆಗೆವ ಕಾಯಕ ಊರಲ್ಲಿ ಯಾರಿಗೂ ಬೇಡವಾದಾಗ ಹೊಸ ಕಸುಬಿಗೆ ಇಳಿದಿದ್ದ. ಕಾಲಾಂತರದಲ್ಲಿ ಕಾಡೇ ಇಲ್ಲವಾಗಿ ಊರ ಸುತ್ತಮುತ್ತ ಹೊಲಗಳ ತೆವರಿಗಳಲ್ಲಿ ಮಾತ್ರ ಉಳಿದಿದ್ದ ಮರಗಳ ನಿರ್ಮೂಲನ ಯೋಜನೆಗೆ ಹಗಲು, ರಾತ್ರಿ ದುಡಿಯುತ್ತಿದ್ದ ರಾಜನ ಮೂಲಕವೆ ನಾಕೈದು ಮರ ಖರೀದಿಸಿದೆ. ಊರ ಸುತ್ತ ಏಳೆಂಟು ಮೈಲಿ ಪಾಸಲೆಯಲ್ಲಿ ಯಾರ ಯಾರ ಜಮೀನಿನಲ್ಲಿ ಯಾವ ಯಾವ ಜಾತಿಯ ಮರಗಳಿವೆ. ಅವುಗಳ ದಪ್ಪ, ಎತ್ತರ ಇತ್ಯಾದಿ ವಿವರಗಳನ್ನು ಕೇಳುವುದೆ ತಡ ತಕ್ಕೋ ನಮ್ಮೂರ ಸುಬ್ಬಾಭಟ್ಟರ ಬಾಯಿಂದ ಪುತಪುತನೆ ಮುತ್ತುಗಳು ಉದುರುವ ಹಾಗೆ ಇವನೂ ಉದುರಿಸಿ ಬಿಡುತ್ತಿದ್ದ. ಅವನ ಪ್ರಕಾರ, ಹಳ್ಳಿಗಾಡಲ್ಲಿ ಉಳಿದಿರುವ ಉತ್ತಮ ಮರಗಳೆಂದರೆ ಬೇವು, ಬಾಗೆ, ಬಿಲವಾರ ಮತ್ತು ತವಸದ ಮರಗಳು ಮಾತ್ರ. ಮನೆಗೆ ಬೇಕಾದ ಕಿಟಕಿ, ಬಾಗಿಲುಗಳ ನಿಲಕ್ಕೆ, ಜಂತಿ, ರಿಪೀಸು ಮತ್ತು ತೊಲೆಗಳಿಗೆಲ್ಲಾ ಇವೇ ಐನಾತಿ ಮರಗಳು. ಹಲಗೆಗೆ ಮಾವಿನ ಮರ ಸಾಕು. ಅದಕ್ಕಿಂತ ಪಮಾಸಿ ಅಂದರೆ ಹಲಸಿನ ಮರವೇ ಸರಿ ಎನ್ನುತ್ತಿದ್ದ. ಅವನ ಮಾತಿಗೆ ಕುಮ್ಮಕ್ಕಾಗಿ ಮಂಚಾಚಾರಿಯೂ ಕದಗಳನ್ನೆಲ್ಲಾ ಹಲಸಿನ ಹಲಗೆಯಲ್ಲಿ ಮಾಡಿಸಿ ಅಂತ ಒತ್ತಾಯಿಸಿದ. ಹಲಸಿನ ಹಲಗೆಗಳು ತುಂಬಾ ನುಣುಪಾಗಿರುತ್ತವೆ. ಮೇಲಾಗಿ ಅವಕ್ಕೆ ಚಿನ್ನದ ಬಣ್ಣ ಬೇರೆ ಅಂದ. ನನಗೇಕೊ ಫಲ ಕೊಡುವ ಮರ ಕೊಂಡು ಕಡಿಸಲು ಮನಸ್ಸಾಗಲಿಲ್ಲ. ಮನೆಯ ಕೆಲಸ ಮುಗಿಯುತ್ತಾ ಬಂದರೂ ಕಿಟಕಿ, ಬಾಗಿಲುಗಳಿವೆ ಇನ್ನೂ ಕದ ಕೂಡಿಸಿರಲಿಲ್ಲ. ಊರಿನಲ್ಲಂತೂ ಹಲಸು ಮತ್ತು ಮಾವಿನ ಮರಗಳ ಕೊಲೆ ನಿರಂತರವಾಗಿ ಸಾಗಿತ್ತು. ಗಾಣಿಗರ ರಾಜ ಕಂಡಾಗೆಲ್ಲಾ ನನಗೆ "ಅಲ್ಲೊಂದು ಚೆನ್ನಾಗಿ ಬಲ್ತು ಕಟರ್ನಾಗದೆ,

ಕುಯ್ಸಿದ್ರೆ ಹಲಗೆಯಂಗಿರ್ತವೆ ಗೊತ್ತ? ಒಳ್ಳೆ ಬಂಗಾರದ ತಗಡ್ನಂಗೆ ಗುದಗುಡ್ತವೆ, ಬೇಕಾ? ಬ್ಯಾಡ್ವಾ?" ಎಂದು ಪುಸಲಾಯಿಸಿದ. ಮತ್ತೆ ನಾನು ಸುಮ್ಮನಾಗಿದ್ದು ಕಂಡು ಈಗ ತನಗೆ ದಿನವೂ ಮೈಸೂರಿನಿಂದ ಗಿರಾಕಿಗಳು ಬರುವುದು, ಹಲಸಿನ ಹಲಗೆಗಳಿಗಾಗಿ ಅವರ ಒತ್ತಾಯ, ಊರಜನರೂ ಕೈತುಂಬ ಒಂದೇ ಸಲ ಹಣ ಸಿಕ್ಕುತ್ತೆ ಅಂತ ಹಣ್ಣು ಬಿಡುವ ಮರಗಳನ್ನು ತಾವಾಗಿಯೇ ಬಂದು ಮಾರುವುದು ಇತ್ಯಾದಿ ವದರುತ್ತಿದ್ದ. ನಮ್ಮ ಊರ ಸುತ್ತ ನೂರಾರು ಹಲಸಿನ ಮರಗಳಿದ್ದವು. ಅವಕ್ಕೆಲ್ಲ ಏನಾದರೊಂದು ಹೆಸರು ಕೂಡ ಇತ್ತು. ಚಿಕ್ಕಂದಿನಲ್ಲಿ ಅವುಗಳಲ್ಲಿ ಬಹಳಷ್ಟು ಮರಗಳ ಹಣ್ಣಿನ ರುಚಿ ನನ್ನ ನಾಲಿಗೆಗಿಳಿದಿತ್ತು. ಹಣ್ಣು ಬಿಡುವ ಮರ ಯಾರೂ ಕಡಿಯಬಾರದು ಎಂದು ಬಹುಕಾಲದಿಂದ ಇದ್ದ ನಂಬಿಕೆ ಸಡಿಲವಾಗಿ, ಗಾಣಿಗರ ರಾಜನ ಕಣ್ಣಿಗೆ ಬಿದ್ದ ಮರಗಳು ಒಂದೊಂದೆ ಮಾಯವಾಗತೊಡಗಿದ್ದವು. ದೂರದಿಂದ ನೋಡುವವರಿಗೆ ಮಾವು ಮತ್ತು ಹಲಸಿನ ಮರಗಳ ತೋಪಿನೊಳಗೆ ಹುದುಗಿರುವಂತೆ ಕಾಣುತ್ತಿದ್ದ ಊರೀಗ ಬಟಾಬಯಲಾಗಿ ಬಿಕೋ ಅನ್ನುವಂತೆ ಕಾಣುತ್ತಿತ್ತು. "ಫಲ ಕೊಡೊ ಮರ ಕಡಿಯೋದು ಒಂದೆ, ಹಸುಮಕ್ಕಳ ಕತ್ತು ಕಡಿಯೋದು ಒಂದೆ" – ಎಂದು ಇಷ್ಟು ಕಾಲ ಗಾಢವಾಗಿ ನಂಬಿದ್ದ ನನ್ನ ಜನರ ನೈತಿಕ ಅವನತಿಯೂ ಶುರುವಾಗಿತ್ತು.

ಮನೆಯ ಗಾರೆ ಕೆಲಸ ಮುಗಿಯುತ್ತಾ ಬಂದರೂ ನನ್ನ ಕದಗಳು ಇನ್ನೂ ಸಿದ್ಧವಾಗಲಿಲ್ಲ. ನನಗೆ ನಾನೇ ಸುಮಾರು ಸಲ ಏನೆಲ್ಲಾ ಸಬೂಬು ಹೇಳಿಕೊಂಡರೂ ಯಾಕೊ ಕಡೆಗೂ ಮನಸ್ಸು ಮಾತ್ರ ಹಲಸಿನ ಮರದ ಹಲಗೆಗಳನ್ನು ಒಪ್ಪಲೇ ಇಲ್ಲ. ಯಾರೂ ಇಷ್ಟಪಡದ ಆಲದ ಮರದ ಹಲಗೆಗಳಿಂದಲೇ ಕದ ಮಾಡಿಸಿದೆ. ಇದನ್ನು ಕಂಡು ನಗಾಡಿದ ರಾಜನಿಗೆ ಅವನು ಮಾಡುತ್ತಿರುವುದು ತಪ್ಪು, ಅಪರಾಧ ಎಂದು ಅವನಿಗೆ ಮನದಟ್ಟಾಗುವಂತೆ ಹೇಳಿದೆ. ನಾನೇ ಅರಣ್ಯ ಇಲಾಖೆ ಅಧಿಕಾರಿಗಳಿಗೆ ತಿಳಿಸಿ ನಿನ್ನ ಬಲಿ ಹಾಕಿಸುತ್ತೇನೆ ಅಂದೆ. ಅದಕ್ಕವನು ಒಂದು ಚೂರೂ ಮೈಟು ಮಾಡದೆ ಇನ್ನಷ್ಟು ಜೋರಾಗಿ

ನಗುತ್ತ "ಅಯ್ಯೋ ನಿಂಗೆಲ್ಲೋ ಹುಚ್ಚು, ಫಾರಿಸ್ಟ್ರು ಸಾಮೀಲಾಗ್ದೆ ಇದೆಲ್ಲಾ ಆಯ್ತದ? ಬರೋ ಲಪ್ವೇಲಿ ಮುಕ್ಕಾಲೆಲ್ಲಾ ಅವರ ಹಿಂಡೆ ಕೂಳ್ಗೇ ವೋಯ್ತದೆ" ಎಂದವನೆ ಯಾವ ಅಳುಕೂ ಇಲ್ಲದೆ ಲುಂಗಿಯನ್ನು ಎತ್ತಿಕಟ್ಟುತ್ತ ತನ್ನ ಕೊಕ್ಕರೆ ಕಾಲುಗಳನ್ನು ಬೀಸಿ ಬೀಸಿ ಎಸೆಯುತ್ತ ಅದೆಲ್ಲೊ ಹಾರಿ ಹೋದ.

ಗಾಣಿಗರ ರಾಜನ ಮಾವು ಮತ್ತು ಹಲಸಿನ ಮರಗಳ ಹುಟ್ಟನ್ನೆ ನೆಲಸಮ ಮಾಡುವ ಕ್ರಿಯೆ ಯಾವ ಅಡ್ಡಿ ಆತಂಕವೂ ಇಲ್ಲದೆ ನಿರಂತರವಾಗಿ ಸಾಗಿತ್ತು. ನಾನು ಅವನು ಸಿಕ್ಕಾಗೆಲ್ಲ ಮರ ಕಡಿದು ಬಯಲಾಗುವುದರಿಂದ ಮುಂದೆ ಆಗುವ ಅನಾಹುತಗಳನ್ನು ತಿಳಿಸಿ ಹೇಳಿದರೆ "ನಿಂದೊಳ್ಳೆ ಪುರಾಣ ಆಯ್ತು, ಮರ ಇರೋದೆ ಕಡಿಯಾಕೆ ತಾನೆ?" ಎಂದು "ನಾನೇನು ಕದ್ದುಗಿದ್ದು ಕಡ್ದು ಸಾಗ್ಸಾಕಿಲ್ಲ, ರಾಜಾರಷ್ಟಾಗೆ ಮಾಡ್ತಾ ಇವ್ನಿ, ನಂಗ್ಯಾರೂ ಏನೂ ಯೇಳ್ಬೇಕಿಲ್ಲ" ಅಂತ ನಿಷ್ಠುರವಾಗಿ ಒಂದು ದಿನ ಅಂದುಬಿಟ್ಟ. ಅವನ ಧಿಮಾಕಿಗೆ ನನಗೂ ರೇಗಿ ಹೋಗಿ ಅವತ್ತೆ ವಲಯ ಅರಣ್ಯಾಧಿಕಾರಿಗೆ ಒಂದು ಅರ್ಜಿ ಬರೆದೆ. ಅದರ ಪ್ರತಿಯೊಂದನ್ನು ಮೇಲಿನವರಿಗೂ ರವಾನಿಸಿದೆ. ಒಂದೆರಡು ವಾರ ಬಿಟ್ಟು ತನಿಖೆಗೆಂದು ಬಂದವನು ನನ್ನ ತನಿಖೆಗೇ ಶುರುಮಾಡಿದ. ಯಾವ ಮರ ಕಡಿದದ್ದು? ಮರ ಇದ್ದ ಜಮೀನಿನ ಸರ್ವೆ ನಂಬರ್ ಏನು? ಅದು ಹಿಡುವಳಿ ಜಮೀನೊ ಅಥವಾ ಬಗರ್ ಹುಕುಂ ಜಮೀನೊ? ಮರ ಕಡಿದಿದ್ದರೆ ಬುಡಬೇರು ಇರಬೇಕಲ್ಲ ಅದೆಲ್ಲಾ ತೋರಿಸ್ತೀರಾ? ಇತ್ಯಾದಿ ಅವನ ಪ್ರಶ್ನೆಗಳಿಂದ ನಾನೇ ತತ್ತರಿಸಿ ಹೋದೆ. ಕಡೆಗೆ ನಾನು ಬಹುಕಾಲದಿಂದ ಕಂಡಿದ್ದ, ಕಳೆದ ವಾರವಷ್ಟೇ ರಾಜನ ಮಂತ್ರದಂಡದಿಂದ ಮಾಯವಾಗಿದ್ದ ಜೀರಿಗೆ ಮಾವನ ಮರದ ಮೋಟನ್ನು ತೋರಿಸಲು ಕರೆದೊಯ್ದೆ. ಅಲ್ಲಿ ಹೋಗಿ ನೋಡಿದರೆ ಮರದ ಮೋಟಿರಲಿ, ಅದರ ಒಂದು ಚಕ್ಕೆಚೂರೂ ಇಲ್ಲದಂತೆ ಮಾಡಿಬಿಟ್ಟಿದ್ದಾರೆ. ನಾನು ಮರುಮಾತಿಲ್ಲದೆ ಪೆಚ್ಚಾಗಿ ಹಿಂತಿರುಗಿದೆ. ರಾಜನ ಅಟ್ಟಹಾಸದ ನಗು ಮಾತ್ರ ನನ್ನನ್ನು ಆಗೀಗ ಅಡ್ಡಗಟ್ಟಿ ಅಣಕಿಸುತ್ತಲೇ ಇತ್ತು.



# ಅವ್ವನ ಬೊಡ್ಕ

ದೂರದ ದೇಶಲಿ ದೊಡ್ಡ ಹುದ್ದೆಲಿ
ಇರುವ ಮಂಜನ ನೆನ್ಸಿಕಂಡ್
ಹಳ್ಳಿಲಿ ಇರುವ ಅವ್ವ ಕಣ್ಣೀರ್ ಹಾಕಿದೆ

ಒಂಬತ್ತ್ ತಿಂಗ ಹೊತ್ತ್ ಹೆತ್ತ್
ಪೊರ್ಲ್‌ಲಿ ಸಾಂಕಿ, ವಿದ್ಯೆ ಕಲ್ಸಿ
ವಿದೇಶಕ್ಕೆ ಕಳ್ಸಿದ ಮಂಜನ ಒಮ್ಮೆ ನೋಡೋಕು
ಪುಳ್ಳಿಕಳ ಕೈಲಿ ಹಿಡ್ದ್ ಆಡ್ಸೋಕು
ಅವ್ವನ ಆಸೆಗೆ ಮಿತಿನೇ ಇಲ್ಲೆ

ಎಸಿ ರೂಮ್‌ಲಿ ಈಸಿ ಚೇರ್‌ಲಿ
ಕುದ್ದ ಮಂಜಂಗೆ ಹೆತ್ತವ್ವನ ನೆಂಪಿಲ್ಲೆ
ಮೊಬೈಲ್‌ಲಿ ಮುಳ್ಗಿ ಮೈಮರ್ತ ಪುಳ್ಳಿಕಳಿಗೆ
ಹಳ್ಳಿ ಅಜ್ಜಿನ ಹಳ್ಳಿ ಕತೆಗಳ ಹಂಗ್ ಬೇಕಿಲ್ಲೆ
ಸೊಸೆಗಂತೂ ಅತ್ತೆನ ನೋಡಿಕೆ ಮೊನ್ಸ್ ಇಲ್ಲೆ

ಹಳ್ಳಿ ಮನೆಲಿ ಸೋರುವ ಮಾಡ್ ನಡಿಲಿ
ಕುದ್ದ ಅವ್ವಂಗೆ ಮಂಜನ ಬುಟ್ಟ್ ಬೇರೆ ದಿಕ್ಕಿಲ್ಲೆ
ಎಲ್ಲರ ಎದ್ರ್ ಮಂಜನ ಗುಣಗಾನ ಮಾಡುವ ಅವ್ವ
ಉಂಬ ಬಟ್ಲ್ ಎದ್ರ್ ಮಾತ್ರ ಕಣ್ಣೀರ್ ಸುರ್ಸಿದೆ
ಮಂಜನ ಮಾತ್‌ಗಾಗಿ ಕಾದ್ ಕಾದ್ ಮಲ್ಗಿದೆ

ಕಣ್ಣಿಗೆ ನಿದ್ದೆ ಹತ್ತುದ್ಲೆ, ಮೊನ್ಸ್‌ಲಿ ಆಸೆ ಬುಡ್ದುಲೆ
ಮಂಜನ ಫೋನ್ ಇಂದ್ ಬಂದದೆ, ಈಗ ಬಂದದೆ
ಅವ್ವನ ಕಣ್ಣೀರ್ ನೋಡಿ ಬೇಜರಾಗಿ
ಮನೆಲಿರುವ ಬೊಗ್ಗ ನಾಯಿ ಕುಂಯಿ ಕುಂಯಿ ಹೇಳಿ
ಮೋರೆ ನೆಕ್ಕಿದೆ, ಅದರ ಬಾಸೆಲಿ ಸಮ್ದಾನಾ ಮಾಡ್ದೆ

ಅಪ್ರೂಪಕ್ಕೊಮ್ಮೆ ಮಂಜನ ಫೋನ್ ಬಾಕನ
ಅವ್ವ ಹಿಗ್ಗಿದೆ. ಕುಸಿಲಿ ಮತ್ತೆ ಕಣ್ಣೀರ್ ಹಾಕಿದೆ
ಹಕ್ಕಲೆ ಇರುವ ನಾಯಿ ಒಟ್ಟಿಗೆ ದುಃಖ ಹೇಳಿಕಂದೆ
ದೇವ್ರೆ ನನ್ನೊಮ್ಮೆ ಕರ್ಕಂತೇಳಿ ಬೇಡಿ ಮಲ್ಗಿದೆ
ಅವ್ವನಕ್ಕಲೆ ಯಾರ್ ಬಾಕೆ ಬೊತ್ತ್‌ಂತೇಳಿ ನಾಯಿ ಕಾದ್ ಕುದ್ದದೆ.

**ಅಪೂರ್ವ ಚೇತನ್ ಪೆರಂದೋಡಿ**
ಕೊಲ್ಯ ಮನೆ, ನಾಲ್ಕೂರು ಗ್ರಾಮ, ನಡುಗಲ್ಲು ಅಂಚೆ, ಸುಳ್ಯ – 574218

# ಬೆಳ್ಳಿ ಮೋಡಲಿ ತೇಲಿ

ಬೊಳ್ಪುನ ನೆಗೆ ಚೆಲ್ಲಿ
ಅಭಿಮಾನಿಗಳ ಮನ್ಸ್‌ನ
ತಿಂಗಳ ಹೊಳ್ಪ್‌ಲಿ ಮೀಸಿದ
ಪುನೀತ ಎತ್ತಿ ಹೋದನೀ
ಇಷ್ಟ್ ಬೇಗ!
ಇನ್ನೂ ಇತ್ತಲ್ಲ ನಿಂಗೆ
ಸಾಕಷ್ಟ್ ವರ್ಷ
ಕೊಡಿಕೆ ಜನಕೆ
ತರತರದ ಹರ್ಷ!
ಅಪ್ಪನ ರೂಪವೇ
ಹೋಲ್ತಿದ್ದ ನಿಂಗೆ
ಎಷ್ಟೊಂದ್ ಅಭಿಮಾನಿಗಳ
ಸಂತೆನೇ ಇತ್ತ್!
ಬೆಳ್ಳಿತೆರೆಲಿ
ನೀ ಎಂದೂ ಹೊಳೆ
ಹೊಳೆವ ಚುಕ್ಕಿ
ಅದರ ಪೋರ್ಲು ನೋಡಿ
ಜನ ಕೊಣೀತಿದ್ದೊ
ಖುಷಿ ಉಕ್ಕಿ!
ಒಳ್ಳೊಳೆ ಸಿನೆಮಾ
ನೀ ಮಾಡ್ದ್ ಉಟ್ಟು
ನೂರಾರ್ ಕೆಲ್ಸ ಅರ್ಥಕ್ಕೆ
ನಿತ್ತುಟು!
ಎತ್ತಹೋದ್ದ್ ನೀ
ಹಕ್ಕಿ ಹಾರ್ದಂಗೆ
ನೆಗಾಡ್ತಾನೇ ಪರದೆನ
ಖಾಲಿ ಮಾಡ್ದಂಗೆ!

**ಶಿವದೇವಿ ಅವನೀಶಚಂದ್ರ**
ಸುಳ್ಯಕೋಡಿ, ಚೆಟ್ಟಿಮಾನಿ



## ಕೊಡ್ಗ್‌ನ ಗೂಡೆ

ಕೊಡ್ಗ್‌ಂದ ಬರ್ತಾ ಉಟ್ಟು
ನನ್ನ ಗೂಡೆ, ನನ್ನ ಗೂಡೆ
ನನ್ನ ಮಲ್ಲಿಗೆ ಗೂಡೆ
ಎಂಥಾ ಪೊರ್ಲು, ಎಂಥಾ ಹರ್ಲ್
ನನ್ನ ಗೂಡೆ
ಕೊಡ್ಗ್‌ಂದ ಅಳಕದ ಮಲ್ಲಿಗೆ ಗೂಡೆ
ಹಸ್ರ್ ಸೀರೆ ಉಟ್ಕೊಂಡುಟ್ಟು,
ಕೆಂಪು ದಾವಣಿ ಸುತ್ಕೊಂಡುಟ್ಟು
ಎಂತಾ ನಡ್ಗೆ, ಎಂಥಾ ಉಡ್ಗೆ
ಬಳ್ಕ್‌ತಾ ಉಟ್ಟು, ಕುಲ್ಕುತಾ ಉಟ್ಟು ನನ್ನ ಗೂಡೆ
ಕಾಲಿಗೆ ಗೆಜ್ಜೆ ಕಟ್ಟುಟ್ಟು
ಕೈಗೆ ಬಳೆ ತೊಟ್ಟುಟ್ಟು
ಎಂಥಾ ಲಾಯಕ್ ಕಂಡ್ದವ್ವ ನನ್ನ ಗೂಡೆ!
ಆಡ್ತಾಳಪ್ಪ, ಕುಣಿತಾಳಪ್ಪ,
ಬಾರೀ ಪೊರ್ಲು ಕಂಡ್ದಪ್ಪ ನನ್ನ ಗೂಡೆ!
ಎಷ್ಟು ಲಾಯಕ್ ಕಂಡದೆ ನನ್ನ ಗೂಡೆ!

ಯಾವೂರ ಗೂಡೆ, ಇವಳು ಶಿವಾ!
ಹೇಳುದುಲೇ....?
ಹೇಳುದುಲೇ...?

**ಮೂಟೇರ ಕೆ. ಗೋಪಾಲಕೃಷ್ಣ ಎಂ.ಎ.**
Ex-Post-Master, ಕೆ. ಚೆಟ್ಟಳ್ಳಿ ಅಂಚೆ – 571 248 ಮೊಬೈಲ್ : 9480427572




## ನಾವಿರೊಕು ಇವನಂಗೆ

ದಿನಾ ಬೆಳಗಾದರೆ ಅಂವ ಬಾರದಿರ್ದುಲೇ
ಕತ್ತಲಾಕನ ಅಂವ ಹೊಕೆ ಮರಿಯದುಲೇ

ಬೆಳಗೆದ್ದ್ ನೋಡದಿದ್ದರೆ ಅವನ,
ಮನಸ್ಸಿಗೆ ಇರ್ದುಲೇ ಸಮದಾನ

ದೊಡ್ಡವ ಸಣ್ಣವಂತೆಳೋ ಕಿಳೆರಿಮೆ ಅವಂಗಿಲ್ಲೆ
ಬೈದರೂ ಹೊಡ್ದರು ಕ್ಯಾರೆ ಇಲ್ಲೆ

ದೂರ ಹೋದರು ಕಷ್ಟ ಹತ್ರ ಬಂದರೂ ಕಷ್ಟ
ಬಾರದೇ ಇದ್ದರೆ ನಮಿಗೆ ಬದ್‌ಕೇ ನಷ್ಟ

ನಮ್ಮಂಗೆ ಅವಂಗಿಲ್ಲೆ ನೂರೆಂಟು ಆಸೆ
ತಪ್ಪುಲೇ ಅಂವ ಲೋಕಕ್ಕೆ ಕೊಟ್ಟ ಭಾಷೆ

ಕರ್ದವೇ ಅವನ ನಾಲ್ಕಾರ್ ಹೆಸ್‌ರ್
ಕಣ್ಣಿಗೆ ಕಾಂಬೋದು ಅವನೊಬ್ಬನೆ ದೇವ್‌ರ್

ನಾವ್ ಇರೊಕು ಇವನಂಗೆ,
ಯಾರ ಮಾತಿಗೂ ಕಿವಿ ಕೊಡದಂಗೆ

ಜಗ್ಗದೆ ಬಗ್ಗದೆ ಹೋರಾಡಿಕೆ
ಭಾಷೆ ಪದ್ಧತಿ ಸಂಸ್ಕೃತಿನ ಉಳ್ಸಿ ಬೆಳ್ಸ್‌ಕೆ.

**ಬೈಲೇರಾ ಭಾನು ಅಶೋಕ್**
ಬಿಳಿಗೇರಿ




## ಸೇರ್



● **ತೆಕ್ಕಡೆ .ಬಿ. ಕುಮಾರಸ್ವಾಮಿ**

"ಸೇರಿಗೆ ಸವ್ವಾಸೇರಾ"? ಪಂಥಕ್ಕೆ ಪಂಥ ಕಟ್ಟುವ, ಜವಾಬ್‌ಗೆ ಜವಾಬ್ ಕೊಡುವ ಮಾತ್ ಅಲ್ಲೊಮ್ಮೆ, ಇಲ್ಲೊಮ್ಮೆ ಮನೆಲಿ, ನಾವುಸೇರ್ವಲ್ಲಿ, ಕೆಲ್ಸಲಿ, ಪಂದ್ಯಲಿ, ಪಂಥಲಿ ಕೇಳಿ ಬರುವ ಮಾತ್. ಹಂಗೆನೆ ಮಾತ್‌ಗೆ ಒಂದು ತೂಕ ಬೇಕುತ ಹೇಳುವೆ. ಬದ್‌ಕ್‌ಗೆ ಒಂದು ದಾರಿ–ಗುರಿ ಬೇಕು. ಅದ್‌ಕೆ ಅಡಿಕಂಡವೆ ಅಂವ ತೂಗಿ ಆಳ್ದ್ ನೋಡಂವತ, ಕೆಲ್ಸ ಮಾಡಿಕೊಡುಂವಂತ. ಹಿಂಗೆ ಏನೇ ಅದರೂ ಜೀವನ ತೂಕಂದ ಸಾಗುವ ಸಾಧ್ಯತೆನ ಹೆಚ್ಚಿ ಹೊಂದಿರೊಕು. ತೂಕ ತೇಳಿರೆ ಅಂವನ ತಕ್ಕ್‌ಡಿಗೆ ಹಾಕಿ ತೂಗಿರೆ, ಹಂದಿ ತರ 100–120 ಕೆ.ಜಿ ತೂಗುವ ಆಳ್ ಅಲ್ಲ. ಅಂವನ ನಡ್ತೆ, ಜನರೊಟ್ಟಿಗೆ ಇರುವ ಹೊಂದಾಣಿಕೆ, ಯೋಚಿಸಿ ಸಾಂದರ್ಭಿಕ ಆಗಿ ಮತಾಡುವ ಮಾತ್. ಇಲ್ಲಿ ಯಾವುದೇ ಒಂದು ವಸ್ತುಗೆ ತೂಕ ಇದ್ದದೆ. ಹಿಂದೆ ವಸ್ತು ವಿನಿಮಯ ಪದ್ಧತಿ ಇರ್‌ಕನ ವಸ್ತುನ ತೂಕದ ಆಧಾರಲಿ ವ್ಯವಹಾರ ನಡೆತ್ತಿತ್ತ್‌ಲೆ. ಅದರೂ ಯಾವುದೋ ಒಂದು ಅನೌಪಚಾರಿಕ ತೂಕ ಇದ್ದಿರ್ದು. ಯಾವುದೇ ವಸ್ತುನ ತಕಣ್‌ಕನ, ಕೊಡ್‌ಕನ ತೂಕ ಮಾಡಿ ಅದಿಕೆ ಬೆಲೆ ಕಟ್ಟುದು.

ಅಕ್ಕಿ, ರಾಗಿ, ಗೋಧಿ, ಜೋಳ ಧಾನ್ಯಗ ಇರ್ದು. ಬೇಳೆ ಕಾಳ್‌ಗಳ್ನ ಒಂದು ಅಳತೆಗೋಲುನ ಪಾತ್ರೆಲಿ ಹಾಕಿ ಕೊಡ್ತಿದ್ದ ಅಂದನ್ ಅನೌಪಚಾರಿಕ ಮಾನದಂಡನೇ ಸೇರ್. ಹಿಂಗೆ ಪಾವು, ಮಾನ, ಸೇರ್. ಸೇರ್ ಭಾಗಶಃ 100ತ ಎಣಿಸಿಕಂಡರೆ, ಮಾನ ತೇಳ್ದು ಅದರ ಅರ್ಧಭಾಗ. ಮತ್ತೆ ಪಾವು ಕಾಲ್‌ಭಾಗ. ಇಂದ್ ಮೈಕ್ರೋಗ್ರಾಂ, ಮಿಲಿಗ್ರಾಂ, ಗ್ರಾಂ, ಕಿಲೋಗ್ರಾಂ ತೇಳುವ ಆಳ್ತೆ, ನಿಖರತೆಂದ ಕೂಡಿರುವ ಅಳತೆ ಮಾಪನ. ಆದರೆ ನಮ್ಮ ಪಾವು, ಮಾನ ಸೇರ ಅಷ್ಟೊಂದು ನಿಖರತೆಂದ ಕೂಡಿರ್ದುಲೆ. ಇಂಥ ನಿರ್ಧಿಷ್ಟತೆ, ನಿಖರತೆ ಇಲ್ಲದ ಸಣ್ಣ ಸಣ್ಣ ಅನೌಪಚಾರಿಕ ಮಾಪಕ ತೇಳಿರೆ ಚಿಟಿಕಿ, ಪಿಂಡಿ, ಪುಂಡಿ ಇಲ್ಲೆ ಹಿಡಿ, ಚಿಟಿಕಿ ತೇಳಿರೆ ತೊರು ಬೆರಳ್ ಮತ್ತೆ

ಹೆಬ್ಬೆಟ್ ಬೆರಳ್‌ನ ನಡುಲಿ ಹಿಡ್ದ್ ವಸ್ತು. ಅವ್ವ ಸಾರ್ ನೆಕ್ಕಿ ನೋಡಿ ಇನ್ ಎಷ್ಟ ಉಪ್ಪ ಹಾಕಕೂ ತೇಳ್‌ಕನ ಚಿಟ್‌ಕಿ ಒಪ್ಪ ತೇಳಿ ಹಾಕಿದೆ. ಮತ್ತೆ ಪಿಂಡಿ, ಪಿಂಡಿತೇಳಿರೆ ಐದ್ ಬೆರ್‌ಳ್ ಸೇರಿ ಹಿಡ್ಕಂಬ ವಸ್ತು, ಮತ್ತೆ ಪುಂಡಿ ಇಲ್ಲೆ ಹಿಡಿ. ಹಿಂದೆ ಭಿಕ್ಷೆ ಬೇಡಿಕೆ ಮನೆ ಮನೆ ಭಿಕ್ಷುಕರ್ ಬಾಕನ ಒಂದು ಹಿಡಿ ಅಕ್ಕಿ ಹಾಕ್‌ತ್ತಿದ್ದೊ. ಹಂಗೆ ಅಜ್ಜ, ಅಜ್ಜಿಕ ಹೇಳಿಕಂಡವೆ. ನನ್ನ ಪಿಳ್ಳೆಗೆ ಒಂದು ಹಿಡಿ ಅಕ್ಕಿ ಹಾಕಂಡ್ ಬುಟ್ರೆ ಸಾಕ್ ಮತ್ತೆ ಸತ್ತರೂ ಪರವಾಗಿಇಲ್ಲೆತ. ಇಲ್ಲಿ ಮೊದುವೆ ಮಾಡಿ ಕೊಡಕನ್ ತಲೆಗೆ ಹಾಕುವ ಅಕ್ಷತೆನೇ ಒಂದು ಹಿಡಿ ಅಕ್ಕಿ. ಹಂಗೆ ಮತ್ತೆ ಸತ್ತವನ ಗುಂಡಿಗೆ ಹಾಕಿ ಮಣ್ಣ್ ಹಾಕ್‌ಕನ ಸನ ಹೇಳುವೆ ಒಂದು ಹಿಡಿ ಮಣ್ಣ್ ಹಾಕಿ ಬುಟ್ಟನೆಪ್ಪತಾ. ಮನೆಲೆಲ್ಲ ಈಗಳೂ ಅಡಿಗೆ ಮಾಡ್ಕನ ಅನ್ನಕ್ಕೆ ಅಕ್ಕಿ ಹಾಕುದು ಹಿಡಿಲಿನೆ ಮತ್ತೆ ಬೊಗಸೆ. ಬೊಗಸೆ ತೇಳಿರೆ ಎರಡ ಕೈ ಸೇರ್ಸಿ ಹಿಡಿಯುವಷ್ಟ್. ಬೊಗಸ್‌ಲಿ ಪಾತ್ರ ಇಲ್ಲದಿರ್‌ಕನ ಹೊಳೆಲಿ ನೀರ್‌ಕುಡ್ದವೆ, ಹಂಗ್ಗೆ ಸೂರ್ಯನಂಗೆ ಸೂರ್ಯ ನಮಸ್ಕಾರ ಮಾಡಿ ಹೊಳೆಲಿ ನೀರ್‌ಬುಟ್ಟವೆ. ಎಳ್ಳನೀರ್ ಬುಂಡ್‌ಕನ, ಪಿಂಡ್ ಪ್ರಧಾನ ಮಾಡ್‌ಕನ ಬೊಗಸೆಲಿ ಬುಡ್ದು. ಎನೇ ಇರ್ಲಿ ಒಮ್ಮೆ ಅನೌಪಚಾರಿಕ ಮಾನನ ಹಿಂದೆತಿರ್‌ಗಿ ನೋಡಿಕಂಡಂಗೆ ಆತ್.

ಒಂದು ಸೇರ್ ತೇಳಿರೆ ಈಗನ ಒಂದುಕೇಜಿಗೆ ಹೋಲಿಕೆ 1000 ಗ್ರಾಂ ತ. ಮಾನ = 500 ಗ್ರಾಂ, ಪಾವು 250 ಗ್ರಾಂ. ಒಂದು ಸೇರ್‌ಗೆ ಎರಡ್ ಮಾನ, ಹಂಗೆ ನಾಲ್ಕ್ ಪಾವು ಸೇರಿರೆ ಒಂದು ಸೇರ್. ಧಾನ್ಯಗಳ ಸಂಗ್ರಹಿಸಿ ಇಸುವ ಸಾಧನಗಳನ್ನ ನೋಡ್ತಾ ಹೋದರೆ ಮಡಿಕೆ, ಕಡಿಕೆ, ಕೊಮ್ಮೆ, ಪತಾಯ. ಮಡಿಕೆ ಎಲ್ಲವುಕೂ ಗೊತ್ತಿರ್ದು.ಕಡಿಕೆ ತೇಳಿರೆ ಬಿದರ್ ಇಲ್ಲೆ ವಾಟೆಂದ ಹೆಣ್ದ್ ಚಾಪೆ ತರ ಉದ್ದದ ಸಾಧನ. ಇದರ್ನ ಸಿಲಿಂಡರ್ ಆಕಾರಲಿ ಕಟ್ಟಿ ಅದರೊಳಗೆ ಭತ್ತ ತುಂಬುಸಿ ಇಸಿರೆ ಅದೊಂದು ವಾರ್ಷಿಕ ಅಳತೆ. ಒಂದು ವರ್ಷದವರೆಗೆ ಉಂಬಕೆ ಎಷ್ಟ್ ಬೇಕುತಾ. ಅದರ್ನ ಅಟ್ಟಲಿ ಕಟ್ಟಿ ಇಸ್‌ತ್ತಿದ್ದೊ. ಗೂಡೆಕೊಡವು ಹೈದನ ಮನೆಗೆ ಬಂದರೆ ಅಟ್ಟ ಹತ್ತಿ ನೋಡ್ತಿದ್ದೊ ಕಡಿಕೆಲಿ ಎಷ್ಟ್ ಬತ್ತ ಕಟ್ಟಿಟುತ್ತಾ. ಹಿಂದೆ ಎಷ್ಟ್ ಆಸ್ತಿ ಉಟ್ಟುತ್ತಾ ಕೇಳ್ತಿತ್‌ಲೆ. ಕಡಿಕೆಲಿ ಎಷ್ಟ್ ಭತ್ತ ಕಟ್ಟಿಟ್ಟುತ್ತಾ ನೋಡ್ತಿದ್ದೊ. ಮತ್ತೆ ಮತ್ತೆ ಎಷ್ಟ ಕಂಡಿ ಕಾಫಿ ಬಂದೆತಾ, ಯಾಲಕ್ಕಿ, ತೆಂಗ್, ಅಡಿಕೆ ಹಿಂಗೆಲ್ಲಾ ಕೇಳಿ ತಿಳ್ಕಂಡ್ ಹೆಣ್ಣ್ ಕೊಡ್ತಿದ್ದೊ. ಈಗ ಬುಡಿ ಡಾಕ್ಟರಾ? ಇಂಜಿನಿಯರಾತಾ ಕೇಳುವೆ. ಆ ಮೇಲೆ ಕೊಮ್ಮೆ ಇದೊಂದು ಬಿದರ್, ವಾಟೆ ಇಲ್ಲೆ ಬೆತ್ತಂದ

ಹೆಣ್ದ್ ಪಾತ್ರೆತರ ಇರುವ ಪರಿಕರ. ಹಂಗೆನೆ ಹುಲ್ಲೊಳಗೆ ಸನ ಸುತ್ತಿ ಇಸ್ತ್ತಿದ್ದೊ. ಮತ್ತೆ ಪತಾಯ, ಇದರ್ನ ಈಗ ಹಳೆ ಐನ್‌ಮನೆ ಇರುವಲ್ಲಿ ಕಾಂಬಕ್. ಆಗ ಒಂದು ಅವಿಭಕ್ತ ಕುಟುಂಬಗ ಜಾಸ್ತಿ ಇದ್ದ ಕಾಲ ತನೆ. ಮನೆನ ಒಂದು ಕಡೆ ಒಂದು ಕೋಣೆ ತರ ಮರಂದ ನಿರ್ಮಿಸಿದ ದೊಡ್ಡ ಗಾತ್ರದ ಬತ್ತ ತುಂಬುಸುವ ಜಾಗ. ಇದರ್ನ ಹಿಂದೆ ಇದ್ದ ಧವಸ ಭಂಡಾರಲಿ ಸನ ನೋಡಕ್. ಹೊಸ ಬತ್ತ ಬಾಕನ ಅಲ್ಲಿ ಬತ್ತ ಹಾಕಿ ಮೆಂಬರ್ ಆತಿದ್ದೊ. ಪ್ರತಿವರ್ಷ ಇಷ್ಟೆತಾ ಹಾಕ್ತ್ತಿದ್ದೊ ಮತ್ತೆ ಊಟಕ್ಕೆ ಇಲ್ಲದಿದ್ದರೆ ಬತ್ತ ತಕಂಡ್ ಮುಂದೆನ ವರ್ಷ ಬತ್ತ ರೂಪಲಿ ಅಸಲ್, ಬಡ್ಡಿ ಹಾಕುತ್ತಿದ್ದೊ. ಹಂಗೆ ಮೆಂಬರ್ ಆದಂವ ಸತ್ತರೆ ಅಂವಗೆ ಅಂದರೆ ಸತ್ತವನ ಕುಟುಂಬದವುಕೆ ತಿಥಿ ಊಟದ ಕರ್ಚಿಗೆ ದವಸ ಭಂಡಾರಂದ ಭತ್ತ ಕೊಡ್ತಾ ಇದ್ದೊ.

ಅವಂಗೆ ನಿಧಿ ಸಿಕ್ತ್ ಗಡಾ!? ತೋಟದ ಒಳಗೆ ಕೊಪ್ಪರಿಗೆ ಉಟ್ಟುಗಡಾ!?, ಕಡಾಯ ಹೋದ ದಾರಿಗಡಾ ಹಿಂಗೆ ನೆಲದ ಒಳ್‌ಗೆ ಕೊಡಿಟ್ಟ ಹಣದ ಬಗ್ಗೆ ಮಾತಾಡುವೆ. ನಿಧಿ ಸಿಕ್ಕಿ ಬಹಳ ಶ್ರೀಮಂತ ಆದು, ನಿಧಿಗಾಗಿ ಕಾರ್ಯ ಶೋಧನೆ, ಬಲಿಕೊಡ್ದು ಹಿಂಗೆಲ್ಲಾ ಕಥೆಗ, ನಡ್ದ ಘಟನೆಗ ಬಹಳ ಉಟ್ಟು. ನಿಧಿಗಾಗಿ ಬಲಿ ಕೊಟ್ಟವೆತೆಕನ ನಮಿಗೆ ಸಣ್ಣದರ್ಲಿ ತುಂಬಾ ಹೆದ್ರಿಕೆ. ನಿಧಿ ಇರ್ವಲಿ ಹೋದರೆ ಕರ್ದದೆಗಡ, ಒಂಕಂಡರೆ ನಮ್ಮನೆ ತಕಂಡ್ ಹೋದೆಗಡ, ಬಲಿ ಬೇಕುತ ಕೇಳ್ದೆಗಡ, ಅದೃಷ್ಟ ಇದ್ದರೆ ಕೊಪ್ಪರಿಗೆ ಸಿಕ್ಕಿದೆಗಡ, ಇಲ್ಲದಿದ್ದರೆ ಅದ್ ಮಸಿ ಆಗಿ ಬುಟ್ಟದೆಗಡ, ನಿಧಿ ಇರುವಲ್ಲಿ ಸರ್ಪಕಾವಲ್ ಇದ್ದದೆಗಡ ಹಿಂಗೆಲ್ಲಾ ಸಂಗತಿಗ ಅಜ್ಜಂದರ್ ಕುದ್ದಕಂಡ್ ಹೇಳುವ ಕಥಾ ಹಂದರಗ. ಜೊತೆಗೆ ಕಾಲಹರಣ. ಇದನ್ನೆಲ್ಲಾ ಮಕ್ಕ ಕಿವಿ ಕೊಟ್ಟು ಕೇಳ್ದು ಒಂದು ಅಂಜಿಕೆ ಮತ್ತೆ ಕುತೂಹಲ, ಹತ್ತಾರ್ ಪ್ರಶ್ನೆಗೆ ಮಕ್ಕಳ ಸುತ್ತ ಬಂದ ಹೋಗಿ ಉತ್ತರ ಇಲ್ಲದೆ ನೆನಪಾಗಿ ಉಳ್ಕಂಬದು, ಮಣ್ಣಿನ ಒಳಗೆ ಕಡಾಯಲಿ, ಕೊಪ್ಪರಿಗೆಲಿ, ಮಡಿಕೆಲಿ, ಪೆಟ್ಟಿಗೆಲಿ ಹಣ, ಚಿನ್ನಇರ್ದು ನಿಜ. ಅದ್ ಹಿಂದೆ ರಾಜಮಹಾರಾಜರ್, ಶ್ರೀಮಂತರ್ ಹೆಚ್ಚಿಗೆ ಇರ್ದನ್ನ, ಕಳ್ಳರ್ ಕದಿಯಕಾಗದ್, ಪರಕೀಯರ್ ಆಕ್ರಮಣ ಮಾಡಿ ಕೊಳ್ಳೆ ಹೊಡಿಯಕಾಗದ್ ಮುಂದೆನ ಉಪಯೋಗಕ್ಕೆ ಬಾಕುತಾ ಹಿಂಗೆಲ್ಲಾ ಹುಗ್ದ್‌ಇಸ್‌ತಿದ್ದೊ. ಇದ್ ಕಾಲ ಘಟ್ಟದಾಟಿದ ಮೇಲೆ ಹೆಂಗೂ ಯಾರಿಗೋ ಸಿಕ್ಕಿರೆ ಅದ್‌ಅವರ ಪುಣ್ಯನೊ ಏನೋ?. ಸಿಗದೆ

ಇಂತ ಕಡಾಯ ಕೊಪ್ಪರಿಗೆ ಭಾರಿ ಮಳೆಗೆ ರಾತ್ರಿ ಕಾರಣಾಂತರಂದ ಜಾರಿ ತೋಡು ಸೇರಿ, ಹೊಳೆ ಸೇರಿ ಮತ್ತೆ ಸಮುದ್ರ ಸೆರ್ದೆಗಡ, ಅದ್ ಕುಬೇರನ ಸಂಪತ್ತ್ ಕುಬೇರಂಗೆ ಸೇರ್ತ್‌ತ ಸಮದಾನ. ಹಂಗೆ ಅದರ್ನ ತೋರ್ಸಿ ಹೇಳುವೆ ಇದ್ ನಿಧಿ ಹೋದ ಜಾಗತಾ.

ಗಡಗಡ ಸಂಗತಿ ಹೇಳ್ತಾ ಹೋದರೂ ಇನ್ನೊ ಇದರ ನಂಬಿಕೆ ಜೀವಂತ ಉಟ್ಟು. ಇದಿಕ್ಕಾಗಿ ಈಗಳೂ ಶೋಧನೆ ಮಾಡ್ತ ಇರ್ದು, ಮಾಟ ಮಂತ್ರ ಮಾಡಿ ನಿಧಿ ಬಗಿಯದೋ ಕೆಲವು ಮೋಸ ಹೋದು, ಬಲಿಕೊಡ್ದು ಇಂತದೆಲ್ಲಾ ಈಗಳೂ ಉಟ್ಟು. ಯಾರಿಗೆ ಸಿಕ್ಕಿಟ್ಟು, ಯಾರಿಗೆ ಬುಟ್ಟುಟು ನಂಗೆ ಗೊತ್ತುಲೆ. ಅದ್‌ರೊ ಅಪ್ಪ ನಮ್ಮ ತೋಟದ ಒಳಗೆ ಒಂದು ಜಾಗ ತೋರ್ಸಿತ್ತ್. ಇಲ್ಲಿ ನಿಧಿ ಉಟ್ಟು ಅದರದ್ ಗುಂಡಿ ಬಿದ್ದದ್‌ತಾ. 50 ವರ್ಷಂದ ಕಾಯಿತಾ ಒಳೆ ಆದ್ ನಂಗೆ ಸಿಕ್ಕಿತ್‌ಲೆ.ಅದರೆ ಅದರ ಬುಡಲಿ ನಟ್ಟ ಬಾಳೆ ಮಾತ್ರ ಸುಮಾರ್ ಗೋನೆ ಕೊಟ್ಟತ್. ಚಿನ್ನದಂತ ಹೊಬಾಳೆ ಹಣ್ಣ್. ಕೆಲವೊಂದು ಗೊನೆ ಕಡ್ದ್ ತಿಂದೊಳ್, ಬಹಳಷ್ಟು ಮಾರಿಯೊಳ್. ಆ ಬಾಳೆ ಬುಡಕೆ ಹೋಕನ ಒಂದು ಮಾತ್ರ ಸಣ್ಣ ನೆನಪು ಇಲ್ಲಿ ನಿಧಿ ಉಟ್ಟುತ್ತಾ. ಇದನ್ನೆಲ್ಲಾ ಯಾಕೆ ಹೇಳ್ತಾ ಒಳೆ ತೇಳಿರೆ ಇಲ್ಲಿ ಕಡಾಯ ಕೊಪ್ಪರಿಗೆ ಸನ ಒಂದು ಅಳತೆದ್ ಮಾನ. ಹಿಂಗೆಲ್ಲಾ ನಿಮ್ಮ ತೋಟಲಿ, ಗದ್ದೆಲಿ, ಮನೆ ಒಳಗೆ ಹುಗ್ದ್ ಇಸಿದ ನಿಧಿ ಉಟ್ಟುತ್ತಾ ಆಶೆ ಪಡ್‌ಬಡಿ. ಸಿಕ್ಕುದುತಾ ಇದ್ದದನ್ನೆಲ್ಲಾ ಕಳ್ಕಂಡ್, ಒಂದು ಗಾದೆ ಹೇಳ್ದಂಗೆ "ಗಂಡ ಹೊಸ ಸೀರೆ ತಾದುತಾ ಉಟ್ಟ ಸೀರೆ ಬೆಂಕಿಗೆ ಹಾಕಿ ಕುದ್ದಂಗೆ" ಅದ್ ಕಡೆಗೆ ಗಂಡ ಹೊಸ ಸೀರೆನೂ ತಾತ್‌ಲೆ ಇದ್ದ ಹಳೆ ಸೀರೆನೂ ಇಲ್ಲೆ, ಹಂಗೆ ಆದು ಬೇಡ. ಪಾಲಿಗೆ ಬಂದದೇ ಪಂಚಾಮೃತತಾ ಬದುಕೋನಾ.

ಅನೌಪಚಾರಿಕ ಅಳತೆ ಮಾನಗ ನಮ್ಮ ಪೂರ್ವಿಕರ್ ಬಳ್ಸತಾ ಇದ್ದೋ. ಅದ್ ಇಂದಿಗೂ ನಮ್ಮೊಟ್ಟಿಗೆ ಉಟ್ಟು. ಪ್ರಪಂಚ ಎಷ್ಟೇ ಮುಂದುವರ್ದಿರ್ದು, ಚಂದ್ರ, ಮಂಗಳ ಗ್ರಹಗಳಲ್ಲಿ ಹೆಜ್ಜೆ ಇಸಿರುವ, ಅದರೂ ಹಿಂದೆನ ಬಳಕೆ ಇಗಲೂ ಉಟ್ಟು. ದೂರನ ನೋಡ್ದಾದರೆ ಹೆಜ್ಜೆ, ಗಜ, ಮಾರ್, ಪರ್ಲಾಂಗ್, ಇನ್ನ್ ಹೆಚ್ಚಿನ ದೂರ ಅಲ್ಲಿಗೆ ಹೋಕೆ ಆಗದಿದ್ದರೆ ಏಳ್ ಬೆಟ್ಟಗಳ ಆಚೆ, ಏಳ್ ಸಮುದ್ರ ದಾಟಿ ಹಿಂಗೆಲ್ಲಾ ಹೇಳ್ತಿದ್ದೊ. ಮತ್ತೆ ಉದ್ದನ ಗೇಣ್ ಮೊಳ, ಮಾರ್. ಎತ್ತರಕ್ಕೆ ಮತ್ತೆ ಆಳನ ಪರಿಗಣಿಸುವ ಮಾನಗ ಆಳ್, ಕೋಲುತಾ ಅಂದರೆ ಮರದ ಎತ್ತರ

ಒಂದ್ ಐದ್ ಆಳ್ ಎತ್ತರ, ಹಂಗೆ ಬಾವಿ, ಹೊಳೆದ ಗುಂಡಿನ ಎರಡ್ ಆಳ್, 4 ಕೋಲು ಹಿಂಗೆಲ್ಲಾ ಹೇಳ್ತಿದ್ದೊ ದ್ರವರೂಪದ ವಸ್ತು ಅದರೆ ಕಿಂಡಿ, ಮಿಳ್ಳಿ, ಚೊಂಬು, ಕೊಂಡೆ. ಹಸ್ ಎಷ್ಟ ಹಾಲ್ ಕೊಟ್ಟದೆ ತೇಳಿರೆ ಒಂದು ಕೊಂಡೆ ಹಾಲ್ ಕೊಟ್ಟದೆತಾ ಹೇಳ್ತಿದ್ದೊ. ಸಾಯುವ ಕಾಲಕ್ಕೆ ಅಜ್ಜಿ ಪಿಳ್ಳಿಗೆ ಹಿಂಗೆ ಹೇಳ್ದೆ ನೋಡ್ "ಮಂಜ ಸಾಯಕನಾರ್ ಒಂದು ಬೊಟ್ಟು ನೀರ್ ನೀ ನನ್ನ ಬಾಯಿಗೆ ಬುಟ್ಟು ಬುಡುತಾ"

ಕಳ್ಳ್ ಕುಡಿಯುವು ಆಗ ಈಗನಂಗೆ ತರ್ಟಿ, ಸಿಕ್ಸ್‌ಟಿ, ನೈಂಟಿ, ಕ್ವಾಟ್ರ್ ಪೆಗ್ ಇತ್‌ಲೆ. ಏನಿದ್ದರೂ ಕುಪ್ಪಿ, ಗಲಾಸಿಗೆ ಎಷ್ಟ್ ಹಾಕಕು ತೇಳಿರೆ ಒಂದು ಎರ್ಡ್ ಬೆರ್ಲ್ ಹೊಯಿ ತೇಳ್ತಿದ್ದೊ. ಹಂಗೆ ಮಳೆ ಎಷ್ಟ ಹೊಡ್ತ್‌ತಾ ಭೂಮಿನಾ ಸಣ್ಣ ಹೊಂಡ ಮಾಡಿ ಅದಕ್ಕೆ ಬೆರ್ಲ ಹಾಕಿ ನೊಡ್ತಿದ್ದೊ. ತೊರು ಬೆರ್‌ಳನ ಗೆರೆ ಲೆಕ್ಕ ಹಾಕಿ ಇಂಚನ ಹೇಳ್ತಿದ್ದೊ. ಮಳೆ ಒಂದು ಇಂಚ್, ಎರಡ್ ಇಂಚ್ ಹೊಡ್ತ್‌ತಾ. ಕಾಲಗಣನೆ ಆಕಾಸಲಿ ಸೂರ್ಯನ ನೋಡಿ, ನೆರಳ್‌ನ ನೋಡಿ, ಕೋಳಿ ಕೂಂಗುಕನ ಸುರ್‌ಂದ ಕಡೆಗೆ ಕೂಂಗುವವರೆಗೆ, ಹೂ ಅರಳುವ ಗಳಿಗೆ, ಕುದುಕ, ಕುಂಡ ಕೋಳಿ ಮರ್ಡುದು, ಹಕ್ಕಿಗ, ಕೋಳಿಗ ಗೂಡು ಸೇರುವ ಸಮಯ, ನೆರಳ್ ನೋಡಿಗಂಟೆ ಹೇಳ್ತಿದ್ದೂ.

ಮನ್ಸನ ಬುದ್ಧಿ ಶಕ್ತಿ, ಗುಣನ ಹೆಂಗೆ ಅಳ್ತೆ ಮಾಡ್ಡದೋ ನೋಡಿ. ಈಗನಂಗೆ ಐ,ಕ್ಯೂ ಆಗಲಿ ಮಾರ್ಕ್ ಮೇಲೆ ಆಗಲಿ ಅಲ್ಲ. ಬುದ್ಧಿವಂತ ಅದರೆ ನರಿ. ದಡ್ಡ ಆದರೆ ಕತ್ತೆ. ಹಿಂಗೆ ಕೋಣ, ಹಂದಿ, ನಾಯಿ, ಹಾವು, ಕೋಳಿ, ಹಲ್ಲಿ, ಪಿಜ್‌ನ್ ಪ್ರಾಣಿಗಳ್ನ, ಮರಗಳ್ನ, ವಸ್ತುಗಳ್ನ ಸೇರ್ಸಿ ಹೇಳ್ತಿದ್ದೂ. ಅಂವ ಆನೆ ತರ ಬೆಳ್ದುಟ್ಟು, ಹಂದಿ ತರ ಆಡ್ದೆ, ಹಲ್ಲಿನಂಗೆ ಪಿಚಿಗುಟ್ಟಿದೆ, ಹಾವುತರ ಹಗೆತನ, ಕೋಣನಂಗೆ ಮೈಗಳ್ಳ, ಕಡ್ಡಿತರ ಉಟ್ಟು, ದೊಣ್ಣೆನಂಗೆ ನಿತ್ತುಟ್ಟು. ಗೂಳಿನಂಗೆ ಬೆಳ್ದುಟ್ಟು. ಮೀಸೆ ಬಂದರೂ ಬುದ್ಧಿ ಬಾತಲೆತಾ.

ಅಂದ್‌ನ ಆ ಕಾಲ ಇಂದಿಗೂ ನೆಂಪು ಅದೆ. ಆಗ ಈಗನಂಗೆ ಮಕ್ಕಳ ಜೋಬುಲಿ ಪರ್ಸ್‌ಲಿ ದುಡ್ಡು ಇತ್ತಲೆ. ದುಡ್ಡು ಬೇಕಾದರೆ ಕಾಡ್‌ಂದ ಅಂಟೋಳ ಕಾಯಿ, ಸೀಗೆ ಹೆರ್‌ಕಿ ದುಡ್ಡು ಮಾಡೊಕು. ಅಂಟೊಳ ಕಾಯಿನ ಗೋಣಿಚೀಲಕ್ಕೆ ತುಂಬುಸಿ, ಮನೆ ಕೌಕೊಲಿಗೆ, ಮರದ ಕೊಂಬೆಗೆ ತರಾಸ್ ತೇಳುವ ಆಳ್ತೆ ಸಾಧನಕಟ್ಟಿತೂಗುತ್ತಿದೊ. ಮಸಿ ಮಾಡಿರೆ ಟಿಣ್ಣ್‌ತಂದ್

ಅದರ್ಲಿ ಸೋರ್ಗಿ ಎಷ್ಟ ಟಿಣ್ಣ್‌ತೇಳಿ ಕತ್ತಿ ಹಣ್ಣವಂಗೆ ಮಾರ್‍ತಿದ್ದೊ. ಬಾಳೆಕಾಯಿ ಕೆ.ಜಿ ಲೆಕ್ಕ ಅಲ್ಲಾ ಗೊನೆಕಡ್ಡ್ ಕೆಳಗೆಂದ ಲೆಕ್ಕ ಮಾಡ್ದು 100 ಕಾಯಿಗೆ ಇಷ್ಟ್‌ದುಡ್ಡುತ. ಹಸಿಮೀನ್ ಸನ 100ಕ್ಕೆ ಒಂದು ರೂಪಾಯಿ. ಆಗಏನ್ ತೇಳಿರೆ ಪೆನ್ಸ್‌ಗಿನ್ಸ್ ಇಲ್ಲೆ. ಅಂಟೋಳ ಕಾಯಿ, ಸೀಗೆ ತೊಗಿರೆ ಮಸಿ ತಕಂಡ್ ಗೋಡೆಲಿ ಬರ್ದ್ ಲೆಕ್ಕಚಾರ.

ಸೇರ್‌ಗೆ ತುಂಬಿಸಿ ಅದ್ ಚೆಲ್ಲುವಷ್ಟ್ ಆಳ್ದರೆ ಒಂದು ಸೇರ್ ಆ ಆಳ್ತೆ. ಸೇರ್‌ಗೆ ತುಂಬುಸಿ ಅದರ ಕಂಟನ ಎರಡ್ ಕೈಯಿಂದ ಹಿಡ್ದ್ ಸೋರ್ಗುವೆ, ಸೇರ್‌ನ ಅಳ್ತೆ ಇಗಲೂ ಶುಭ-ಆಶುಭ ಕಾರ್ಯಲಿ ಬಳ್ಸುವೆ. ಅಂದ್‌ನ ಕಾಲಲಿ ಬಿದ್ರ್, ಮರ, ಮಣ್ಣ್, ಮತ್ತೆ ತಾಮ್ರ, ಕಬ್ಬಿಣದ ಸೇರ್, ಈಗ ಸ್ಟೀಲ್‌ದ್ ಸನ ಬಂದುಟ್ಟು. ಮದುವೆ ಕಾರ್ಯಲಿ ಮಾಡುವ ಯಾವುದೇ ಕೆಲ್ಸಕೆ ಸೇರ್‌ಲಿ ಆಳ್ದ್ ಅಕ್ಕಿ ಕೊಟ್ಟವೆ. ಬ್ರಾಹ್ಮಣಂಗೆ, ವಾಲಗದವಂಗೆ, ಹಜಾಮಂಗೆ ಸೇರ್‌ಲಿ ಅಕ್ಕಿ ಕೊಡ್ದು ಒಂದು ಕ್ರಮ. ಅಡಿಗೆಗೆ, ಒಲೆ ಪೊಜೆಗೆ, ಗಣಪತಿಗೆ ಇಸ್‌ಕನ, ಶಾಸ್ತ್ರಗಳಿಗೆ ಎಲ್ಲಾ ಸೇರ್‌ಲೇ ಆಳ್ತೆ ಮಾಡಿಕೊಡ್ದು. ಕೆಲವು ಕಡೆ ಮದುವೆ ಆಗಿ ಗೂಡೆ ಮನೆ ಹೊಸ್ತಿಲ್ ದಾಟಕನ ಸೇರ್‌ಲಿ ತುಂಬುಸಿ ಬಾಗ್‌ಲ್‌ಲಿ ಇಸಿದ ಅಕ್ಕಿನ ಕಾಲ್‌ಂದ ಮಗ್‌ಚಿ ಒಳ ಹುಕ್ಕುವ ಕ್ರಮನೂ ಉಟ್ಟು. ಹುತ್ತರಿ ಹಬ್ಬಲಿ ಒಂದು ಸೇರ್ ಬತ್ತ, ಒಂದು ಮಾನ ಅಕ್ಕಿ ತುಂಬುಸಿ ಬಾಡೆಲಿ ಚಾಪೆ ಹಾಕಿ ನೆಲ್ಲಕ್ಕಿ ಅಡಿಲಿ ಇಸುವೆ. ಆಯುಧ ಪೂಜೆ ಮಾಡ್‌ಕನ ಕೋವಿನ ಒಟ್ಟಿಗೆ ಇನ್ನಿತರ ಅಯುಧಗಳ್ನ ಇಸಿ ಅದರ ಕೆಳಗೆ ಸೇರ್‌ಲಿ ಅಕ್ಕಿ ಇಸುವೆ. ಮನೆ ಸೇರ್‌ಕನಸನ ಸೇರ್‌ಲಿ ಅಕ್ಕಿ ತುಂಬುಸಿ ಇಸುವೆ. ಯಾವ ಕ್ರಮಕ್ಕೂ ಸೇರ್‌ಲಿ, ಪಾವುಲಿ ಅಕ್ಕಿ ಕೊಟ್ಟರೆ ಮತ್ತೆ ಕೊಟ್ಟದಂರ್ದ ಎರಡ್ ಕಾಳ್ ಅಕ್ಕಿ ತಕಂಡ್ ಸೇರ್‌ಗೆ ಹಾಕಿ ಒಳಗೆ ಇಸುವ ಕ್ರಮಉಟ್ಟು.

ಹಿಂದೆಲ್ಲಾ ಧಾನ್ಯಗ, ಬೇಳೆಕಾಳಗ, ಅವುಲಕ್ಕಿ ಎಲ್ಲಾ ಅಳ್ತೆ ಸೇರ್ ಲೆಕ್ಕಲೆ. ಕಾಫಿ ಹುಡಿಗೆ ಕೊಡ್‌ಕನ ಅಕ್ಕಿ ಹುಡಿಗೆ ಕೊಡ್‌ಕನ, ಒಳ್ಳೆ ಮೆಣ್ಸ್ ಕೊಡ್‌ಕನ, ಏಲಕ್ಕಿ ಮಾರ್‌ಕನ ಎಲ್ಲಾ ಸೇರ್ ಲೆಕ್ಕನೆ. ಅನ್ನಕ್ಕೆ ಅಕ್ಕಿ ಹಾಕ್‌ಕನ ಜನ ನೋಡಿ, ಪಾವು, ಮಾನ, ಸೇರ್‌ಲಿ ಅಕ್ಕಿ ಹಾಕುದು ಇಗಳೂ ಉಟ್ಟು. ಮದುವೆ ಸಮಯಲ್ಲಿ ಮದುಮಕ್ಕಳಿಗೆ ಕೈ ಹಿಡಿಲಿ ಅಕ್ಕಿ ಹಾಕುವೆ. ಕೋಳಿಗೆ ಬತ್ತ ಹಾಕುದು, ಪಿಳ್ಳೆಗಳಿಗೆ ನುಚ್ಚಕ್ಕಿ ಹಾಕುದು ಕೈ ಹಿಡಿಲಿ. ಮತ್ತೆ ದೇವುರು, ದೆವ್ವಕ್ಕೆ ಕೊಡ್‌ಕನ, ಕಾರಣ ಇಸ್‌ಕನ ಸುರುಗೆ

ಅಕ್ಕಿ ಕೊಡುವಂವ ಒಂದು ಹಿಡಿ ಹಿಡ್ದ್ ಎಲ್ಲವುಕೆ ಹಂಚಿದೆ. ಅವೆಲ್ಲಾ ಹಿರಿಯಂವ ಎರಡ್ ಮಾತ್ ಹೇಳ್‌ಕನ ಅಕ್ಕಿನ ಕೈಲೆ ಬಲ್ದ್ ಕೈಯಿಂದ ಎಡ್ದ ಕೈಗೆ, ಎಡ್ದೆ ಕೈಯಿಂದ ಬಲ್ದ ಕೈಗೆ ಹಾಕಿಕಂಡ್ ಒಕ್ಕಣೆ ಹೇಳ್ದೆ. ಒಕ್ಕಣೆ ಮುಗ್ದ ಮೇಲೆ ಎಡೆ ಇಸಿದಲ್ಲಿಗೆ ಹಾಕಿ ಕೈ ಮುಗ್ದವೆ. ವೆಂಕಟರಮಣ ತಿರಳ ಬರುವಂವ, ಭೂತ ಕಟ್ಟಿದಂವ ಅಕ್ಕಿನ ಹಿಡ್ದ್ ಮೇಲಕ್ಕೆ ಬಿಸಾಕಿ, ಮೇಲೆಂದ ಕೆಳಗೆ ಬೀಳುವ ಅಕ್ಕಿನ ಹಿಡ್ದ್ ಮುಂದೆ ನಿಂತ ಭಕ್ತರಿಗೆ ಕೊಟ್ಟದೆ. ತಕಂಡ ಭಕ್ತ ಅದರ ಲೆಕ್ಕ ಹಾಕಿ ನೋಡ್ದೆ, ಅಕ್ಕಿ ಎರಡ್, ಎರಡ್ ಸೇರಿ ಕಡೆವರೆಗೂ ಜೋಡಿನೇ ಬಂದರೆ ಕಟ್ಟಿಬಾತ್ ಇದ್ ಅಶುಭತಾ. ಮತ್ತೆ ಎರಡ್–ಎರಡ್ ಆಗಿ ಕಡೆಗೆ ಒಂದೆ ಉಳ್ಕಂಡರೆ ನಡ್ದ್ ಬಾತ್ ಇದ್ ಶುಭತಾ.

ಪಾವು–ಮಾನ–ಸೇರ್ ಹಂಗೆ ಅದರ ಆಳತೆ ದೊಡ್ಡದಾಗ್‌ತಾ ಒಂದು ಪರೆ ಆದೆ. ಪರೆ ತೇಳಿರೆ ಚೌಕಾಕರದ ಮರದ ಸಾಧನ. ಇದರ್ಲಿ 10 ಸೇರ್ ಹಿಡ್ದೆ. ಪರೆ ಮರದ್, ಕಬ್ಬಿಣದ್ ಇದ್ದದೆ. ಇದ್‌ಕೆ ಬತ್ತ ತುಂಬುಸಿ ಅದರ ಮೇಲೆ ಒಂದು ದುಂಡು ಆಕೃತಿನ ದೊಣ್ಣೆನೆ ಆಚೆ ಈಚೆ ಏಳ್ದರೆ ಪರೆ ಸಮತಟ್ಟಾದೆ. ಆಗ ಒಂದು ಪರೆದ್ ಲೆಕ್ಕಾಚಾರ. ಪರೆ ಅದ್ ಮೇಲೆ ಪರ್ ಲೀಟರ್ ಬಾತ್. ಇದೊಂದು ದೊಡ್ಡ ಡ್ರಮ್ ತರ ಇದ್ದದೆ. ಇದ್ 18 ಕೆಜಿ ಇರ್ತಿತ್. ಹಂಗೆ ಎಂಟ್ ಪರೆ ಭತ್ತನ ಆಳ್ದರೆ ಒಂದು ಬಟ್ಟಿತ ಹೇಳ್ತಿದ್ದೊ. ಒಟ್ಟಾರೆ ಸೇರ್ ತೇಳುವ ಒಂದು ಮಾನದ ಸುತ್ತಾ ಬೇರೆ ಬೇರೆ ಮಾನದಂಡಗಳ ನೋಡ್ತಾ ಬಂದೂ ಈಗ ನಿಮಿಗೆ ನಿಮ್ಮ ಮನೆಲಿ ಇರುವ ಸೇರ್, ಮಾನ ಪಾವುನ ಕಡೆ ನೋಡಿ. ಹೆಂಗೆ ಉಟ್ಟುತ್ತಾ ಅದನ್ನೆಲ್ಲಾ ಜೋಪಾನಾಗಿ ಇಸಿ. ನಿಮ್ಮ ಸಂಪತ್‌ನ ಸೇರ್‌ನ ಒಟ್ಟಿಗೆ ಸೇರ್ಸಿಕಂಡ್ ಹೋಗಿ.

**ತೆಕ್ಕಡ ಬಿ ಕುಮಾರಸ್ವಾಮಿ**
ಮುತ್ತಾರ್ಮುಡಿ
ಮೊ :9483234335

## 2021ರ ಅಕ್ಟೋಬರ್‌ಂದ ಡಿಸಂಬರ್ ತಿಂಗ್ಳ ಅಕ್‌ರಿವರೆಗೆ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತು ಸಾಹಿತ್ಯ ಅಕಾಡೆಮಿ ನಡ್ಸಿದ ಕಾರ್ಯಕ್ರಮಗ

1. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಗೌಡ ಸಮಾಜ, ಕುಶಾಲನಗರ ಇವರ ಕೂಡ್‌ಕಟ್ಟ್‌ಲಿ ಅಕ್ಟೋಬರ್ 3ರ್‌ಂದ 5ರವರೆಗೆ ಅರೆಭಾಷೆ ಸಂಸ್ಕೃತಿ ಶಿಬಿರ ಕುಶಾಲನಗರ ಗೌಡ ಸಮಾಜದ ಸಭಾಂಗಣಲಿ ನಡ್‌ತ್. ಶಿಬಿರದ ಉದ್ಘಾಟನೆನ ಕುಶಾಲನಗರ ಗೌಡ ಸಮಾಜದ ಅಧ್ಯಕ್ಷರ್ ಶ್ರೀ ಕೂರನ ಪ್ರಕಾಶ್‌ವು ಮಾಡ್ದೊ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್ ಲಕ್ಷ್ಮೀನಾರಾಯಣ ಕಜೆಗದ್ದೆವು ಉದ್ಘಾಟನಾ ಜಂಬರದ ಅಧ್ಯಕ್ಷತೆನ ವಯಿಸಿದೊ. ಉದ್ಘಾಟನಾ ಜಂಬರಲಿ ಶ್ರೀ ತೆಕ್ಕಡೆ ನೇಮಿರಾಜ್ ಮತ್ತೆ ಶ್ರೀ ಭಾರದ್ವಾಜ ಕೆ.ಆನಂದತೀರ್ಥ ಇವು ನೆಂಟ್ರಾಗಿ ಬಂದಿದೊ. ಶಿಬಿರದ ಸಂಪನ್ಮೂಲ ವ್ಯಕ್ತಿಗಾಗಿ ಶ್ರೀ ಕುಲ್ಲಚೆಟ್ಟಿ ಪೂವಯ್ಯ ಮತ್ತೆ ಶ್ರೀಮತಿ ಕಡ್ಯದ ಪಾರ್ವತಿಯವು ಕೆಲ್ಸ ಮಾಡ್ದೊ. ಅಕ್ಟೋಬರ್ 5ರಂದ್ ಅರೆಭಾಷೆ ಸಂಸ್ಕೃತಿ ಶಿಬಿರದ ಸಮಾರೋಪ ಜಂಬರ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್ ಲಕ್ಷ್ಮೀನಾರಾಯಣ ಕಜೆಗದ್ದೆ ಅವ್ರ ಅಧ್ಯಕ್ಷತೆಲಿ ನಡ್‌ತ್. ಸಮಾರೋಪ ಜಂಬರಲಿ ಶ್ರೀ ಪೆರುಬಾಯಿ ಚಿನ್ನಪ್ಪ, ಶ್ರೀಮತಿ ಕುದುಪಜೆ ಶಾಂತಿ ಭೋಜಪ್ಪ ಮತ್ತೆ ಶ್ರೀ ಸುನೀಲ್ ಪೊನ್ನೆಟ್ಟಿವು ನೆಂಟ್ರಾಗಿ ಬಂದಿದೊ. ಜಂಭರಲಿ ಅಕಾಡೆಮಿನ ಎಲ್ಲಾ ಸದಸ್ಯರ್ ಉಪಸ್ಥಿತರಿದ್ದೊ.

2. ಅಕ್ಟೋಬರ್ 14ರಂದ್ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ವತಿಂದ ಕೃಷ್ಣಾರ್ಜುನ ಕಾಳಗಂತೇಳುವ ಅರೆಭಾಷೆ ಯಕ್ಷಗಾನದ ವಿಡಿಯೋ ಮುದ್ರಣ ಮಾಡ್ಯೊಳೊ.

3. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಶೌರ್ಯ ಯುವತಿ ಮಂಡಲ(ರಿ), ಪೈಲಾರು ಮತ್ತೆ ಚೊಕ್ಕಾಡಿ ಮುನ್ನೂರೊಕ್ಲು ಗೌಡ ಬಾಂಧವರ ಸಮಿತಿ ಇದರ ಕೂಡ್ ಕಟ್ಟ್‌ಲಿ ಅಕ್ಟೋಬರ್ 15ರ್‌ಂದ 17ರ ವರೆಗೆ ಅರೆಭಾಷೆ ಸಂಸ್ಕ್ರತಿ ಶಿಬಿರ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಪೈಲಾರ್ ಇದರ ವಠಾರಲಿ ನಡ್ತ್. ಅರೆಭಾಷೆ ಸಂಸ್ಕ್ರತಿ ಶಿಬಿರನ ಶ್ರೀ ವೆಂಕಟರಮಣ ಕರ್ಮಾಜೆ, ಮಾಗಣೆ ಗೌಡ್ರು, ಚೊಕ್ಕಾಡಿ ಮುನ್ನೂರೊಕ್ಲುವು ಉದ್ಘಾಟಿಸಿದೊ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್ ಲಕ್ಷ್ಮೀನಾರಾಯಣ ಕಜೆಗದ್ದೆವು ಉದ್ಘಾಟನಾ ಜಂಬರದ ಅಧ್ಯಕ್ಷತೆನ ವಯಿಸಿದೊ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಮಾಜಿ ಸದಸ್ಯರಾದ ಶ್ರೀ ಅಣ್ಣಾಜಿ ಗೌಡ ಪೈಲೂರು, ಚೊಕ್ಕಾಡಿ ಮುನ್ನೂರೊಕ್ಲುನ ಗೌರವಾಧ್ಯಕ್ಷರಾದ ಶ್ರೀ ಪುಟ್ಟಣ್ಣ ಗೌಡ ನಾಯರ್ಕಲ್ಲು, ಅಮರಮುಡ್ನೂರು ಗ್ರಾಮ ಪಂಚಾಯಿತಿನ ಅಧ್ಯಕ್ಷರಾದ ಶ್ರೀಮತಿ ಪದ್ಮಪ್ರಿಯಾ, ಪೈಲಾರ್ ಸ.ಹಿ.ಪ್ರಾ.ಶಾಲೆನ ಶಾಲಾಭಿವೃದ್ಧಿ ಸಮಿತಿನ ಅಧ್ಯಕ್ಷರಾದ ಶ್ರೀ

ಯೋಗೀಶ್ ಮಾಡಬಾಕಿಲುವು ನೆಂಟ್ರಾಗಿ ಬಂದಿದೊ. ಶಿಬಿರದ ಸದಸ್ಯ ಸಂಚಾಲಕರಾದ ಶ್ರೀ ಜಯಪ್ರಕಾಶ ಮೋಟಂಡ್ಕವು ಉದ್ಘಾಟನಾ ಜಂಬರಲಿ ಇದ್ದೊ. ಶ್ರೀ ದಯಾನಂದ ಗುಡ್ಡೆಮನೆ, ಶ್ರೀ ತಿರುಮಲೇಶ್ವರ ದಂಬೆತೋಟ, ಶ್ರೀಮತಿ ಮನೋರಮಾ ಕಡಪಳ ಮತ್ತೆ ಶ್ರೀ ಹೂವಪ್ಪ ಗೌಡ ಆನೋರ್ಜಿಯವು ಶಿಬಿರದ ಸಂಪನ್ಮೂಲ ವ್ಯಕ್ತಿಗಾಗಿ ಕೆಲ್ಸ ಮಾಡ್ದೊ. ಅಕ್ಟೋಬರ್ 17ರಂದ್ ಸಮರೋಪ ಜಂಭರ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಧ್ಯಕ್ಷರಾದ ಲಕ್ಷ್ಮೀನಾರಾಯಣ ಕಜೆಗದ್ದೆ ಅವ್ರ ಅಧ್ಯಕ್ಷತೆಲಿ ನಡ್ತ್. ಸವಣೂರು ವಿದ್ಯಾರಶ್ಮಿ ವಿದ್ಯಾಲಯದ ಪ್ರಾಂಶುಪಾಲರಾದ ಶ್ರೀ ಸೀತಾರಾಮ ಕೇವಳ, ಕೆ.ವಿ.ಜಿ ಪಾಲಿಟೆಕ್ನಿಕ್‌ನ ನಿವೃತ್ತ ಪ್ರಾಂಶುಪಾಲರಾದ ಶ್ರೀ ಬಾಲಕೃಷ್ಣ ಬೊಳ್ಳುರು, ಅಮರಮುಡ್ನೂರು ಗ್ರಾಮ ಪಂಚಾಯತ್ ಸದಸ್ಯರಾದ ಶ್ರೀ ಕೃಷ್ಣಪ್ರಸಾದ್ ಮಾಡಬಾಕಿಲು ಮತ್ತೆ ಶ್ರೀ ಆನಂದ ಗೌಡ ಪರ್ಲವು ನೆಂಟ್ರಾಗಿ ಬಂದಿದೊ. ಸಮರೋಪ ಜಂಬರಲಿ ಶಿಬಿರದ ಸದಸ್ಯ ಸಂಚಾಲಕರಾದ ಶ್ರೀ ಜಯಪ್ರಕಾಶ ಮೋಟಂಡ್ಕ ಮತ್ತೆ ಸದಸ್ಯರ್ ಉಪಸ್ಥಿತರಿದ್ದೊ.

4. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಸಂವರ್ಧನ ಸಮಿತಿ, ಅರಂತೋಡು ಗ್ರಾಮ ಇದರ ಕೂಡ್ ಕಟ್ಟ್‌ಲಿ ಅಕ್ಟೋಬರ್ 18ರ್‌ಂದ 20ರ ವರೆಗೆ ಅರೆಭಾಷೆ ಸಂಸ್ಕ್ರತಿ ಶಿಬಿರ ಸಿರಿ ಸೌಧ ಅರಂತೋಡು–ತೊಡಿಕಾನ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಸಭಾಭವನಲಿ ನಡ್ತ್. ಅರೆಭಾಷೆ ಸಂಸ್ಕ್ರತಿ ಶಿಬಿರನ ಶ್ರೀ ವಾಸುದೇವ ಗೌಡ ಪಾರೆಮಜಲುವು ಉದ್ಘಾಟಿಸಿದೊ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್ ಲಕ್ಷ್ಮೀನಾರಾಯಣ ಕಜೆಗದ್ದೆವು ಉದ್ಘಾಟನಾ ಜಂಬರದ ಅಧ್ಯಕ್ಷತೆನ ವಯಿಸಿದೊ. ನೆಂಟ್ರಾಗಿ ಶ್ರೀಮತಿ ಹರಿಣಿ ದೇರಾಜೆ, ಶ್ರೀ ಪಿ.ಬಿ. ದಿವಾಕರ ರೈ, ಶ್ರೀ ಕಿಶೋರ್ ಕುಮಾರ್ ಉಳುವಾರು, ಶ್ರೀ ಶಿವಾನಂದ ಕುಕ್ಕುಂಬಳ, ಶ್ರೀ ತೀರ್ಥರಾಮ ಅಡ್ಕಬಳೆ, ಶ್ರೀ ಮೇದಪ್ಪ ಗೌಡ ಉಳುವಾರು, ಶ್ರೀ ವೆಂಕಟರಮಣ ಪೆತ್ತಾಜೆ, ಶ್ರೀ ಪದ್ಮಯ್ಯ ಬೊಳ್ಳೂರು ಬಂದಿದೊ. ಉದ್ಘಾಟನಾ ಜಂಭರಲಿ ಶಿಬಿರದ ಸದಸ್ಯ ಸಂಚಾಲಕರಾದ ಶ್ರೀ ಪುರುಷೋತ್ತಮ ಕಿರ್ಲಾಯ ಮತ್ತೆ ಸದಸ್ಯರ್ ಇದ್ದೊ. ಅಕ್ಟೋಬರ್ 20ರಂದ್ ಸಮರೋಪ ಜಂಬರ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಧ್ಯಕ್ಷರಾದ ಲಕ್ಷ್ಮೀನಾರಾಯಣ ಕಜೆಗದ್ದೆ ಅವ್ರ ಅಧ್ಯಕ್ಷತೆಲಿ ನಡ್ತ್. ಶ್ರೀ ಸಂತೋಷ ಕುತ್ತಮೊಟ್ಟೆ, ಕು.ಶ್ವೇತಾ ಅರಮನೆಗಯ, ಶ್ರೀ ಕೆ.ಆರ್.ಪದ್ಮನಾಭ, ಶ್ರೀ ಜತ್ತಪ್ಪ ಮಾಸ್ತರ್ ಆಳಿಕೆ, ಶ್ರೀ ಹೊನ್ನಪ್ಪ ಮಾಸ್ತರ್ ಅಡ್ತಲೆ, ಶ್ರೀಮತಿ ವಾರಿಜ ಕುರುಂಜಿ, ಶ್ರೀ ಎಂ.ಆರ್. ಜಯಪ್ರಕಾಶ್ ಮತ್ತೆ ಶ್ರೀಮತಿ ಸರಸ್ವತಿ ಚಿದಾನಂದ ಅಡ್ತಲೆವು ನೆಂಟ್ರಾಗಿ ಬಂದಿದೊ. ಸಮರೋಪ ಜಂಬರಲಿ ಶಿಬಿರದ ಸದಸ್ಯ ಸಂಚಾಲಕರಾದ ಶ್ರೀ ಪುರುಷೋತ್ತಮ ಕಿರ್ಲಾಯ, ಸಂಚಾಲಕರಾದ ಶ್ರೀಮತಿ ಪುಷ್ಪ ಮೇದಪ್ಪ, ಸಹಸಂಚಾಲಕರಾದ ಶ್ರೀ

ಕೇಶವ ಅಡ್ತಲೆ ಮತ್ತೆ ಅಕಾಡೆಮಿನ ಸದಸ್ಯರ್ ಉಪಸ್ಥಿತರಿದ್ದೊ.

5. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಕೊಡಗು ಗೌಡ ಸಮಾಜ (ರಿ), ಕೊಡಗು ಗೌಡ ಯುವ ವೇದಿಕೆ, ಮಹಿಳಾ ಘಟಕ-ಕೊಡಗು ಗೌಡ ಸಮಾಜ, ಬೆಂಗಳೂರು ಇದರ ಕೂಡ್ ಕಟ್ಟ್‌ಲಿ ಅಕ್ಟೋಬರ್ 23 ಮತ್ತೆ 24ರಂದ್ ಅರೆಭಾಷೆ ಸಂಸ್ಕತಿ ಶಿಬಿರ ಕೊಡಗು ಗೌಡ ಸಮಾಜ ಸಭಾಂಗಣ, ಬೆಂಗಳೂರುಲಿ ನಡ್ತ್. ಕೊಡಗು ಗೌಡ ಸಮಾಜ, ಬೆಂಗಳೂರು ಇದರ ಅಧ್ಯಕ್ಷರಾದ ಶ್ರೀ ಕೇಕಡ ಎ.ನಾಣಯ್ಯವು ಅರೆಭಾಷೆ ಸಂಸ್ಕ್ರತಿ ಶಿಬಿರನ ಉದ್ಘಾಟಿಸಿದೊ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್ ಲಕ್ಷ್ಮೀನಾರಾಯಣ ಕಜೆಗದ್ದೆವು ಉದ್ಘಾಟನಾ ಜಂಬರದ ಅಧ್ಯಕ್ಷತೆನ ವಯಿಸಿದೊ. ನೆಂಟ್ರಾಗಿ ಡಾ.ಗುಡ್ಡೆಮನೆ ಚೆಣ್ಣಯ್ಯ ಮತ್ತೆ ಶ್ರೀ ಅಮ್ಮಾಜೀರ ಪೊನ್ನಪ್ಪವು ಬಂದಿದೊ. ಶ್ರೀ ಚಂಡೀರ ಕೆ.ಬಸಪ್ಪ ಮತ್ತೆ ಶ್ರೀಮತಿ ಕಡ್ಯದ ಪಾರ್ವತಿಯವು ಶಿಬಿರದ ಸಂಪನ್ಮೂಲ ವ್ಯಕ್ತಿಗಾಗಿ ಕೆಲ್ಸ ಮಾಡ್ದೊ. ಅಕ್ಟೋಬರ್ 24ರಂದ್ ಸಮಾರೋಪ ಜಂಬರ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಧ್ಯಕ್ಷರಾದ ಲಕ್ಷ್ಮೀನಾರಾಯಣ ಕಜೆಗದ್ದೆ ಅವ್ರ ಅಧ್ಯಕ್ಷತೆಲಿ ನಡ್ತ್. ಶ್ರೀ ಬಾರಿಕೆ ಪಿ. ರಾಘವ, ಶ್ರೀ ಅಮ್ಮವನ ಪಿ. ವಾಸು ಮತ್ತೆ ಶ್ರೀ ಕೊಂಪುಳಿ ಸಿ ಪುಟ್ಟಯ್ಯವು ನೆಂಟ್ರಾಗಿ ಬಂದಿದೊ. ಸಮರೋಪ ಜಂಬರಲಿ ಶಿಬಿರದ ಸದಸ್ಯ ಉಪಸ್ಥಿತರಿದ್ದೊ

6. ಅಕ್ಟೋಬರ್ 25ರಂದ್ ಸುಬ್ರಹ್ಮಣ್ಯದ ಕೆ.ಎಸ್.ಎಸ್.ಕಾಲೇಜ್‌ಲಿ ಕನ್ನಡ ರಾಜ್ಯೋತ್ಸವದ ಲೆಕ್ಕಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಕನ್ನಡ ಚಲನಚಿತ್ರೋತ್ಸವನ ಇಟ್ಟ್‌ಕಂಡಿದ್ದ್, ಬಾಗಲೋಡಿ ದೇವರಾಯರ್ ಕಥೆ ಬರ್ದ್, ಮತ್ತೆ ಉಮಾಶಂಕರ ಸ್ವಾಮಿವು ನಿರ್ದೇಶಿಸಿದ 'ಮುನ್ನೀಫ್'ತೇಳುವ ಚಿತ್ರನ ಪ್ರದರ್ಶಿಸಿದೊ.

7. ಅಕ್ಟೋಬರ್ 26ರಂದ್ ವಿವೇಕಾನಂದ ವಿದ್ಯಾಸಂಸ್ಥೆ, ವಿನೋಬನಗರ, ಜಾಲ್ಸೂರುಲಿ ಕನ್ನಡ ರಾಜ್ಯೋತ್ಸವದ ಲೆಕ್ಕಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಕನ್ನಡ ಚಲನಚಿತ್ರೋತ್ಸವನ ಇಟ್ಟ್‌ಕಂಡಿದ್ದ್ ಸಚ್ಚಿದಾನಂದ ಹೆಗಡೆವು ಕಥೆ ಬರ್ದ್, ಭಾರತೀ ಶಂಕರ ನಿರ್ದೇಶಿಸಿದ 'ಕಾರಂತಜ್ಜನಿಗೊಂದು ಪತ್ರ'ಂತೇಳುವ ಚಿತ್ರನ ಪ್ರದರ್ಶಿಸಿದೊ.

8. ಅಕ್ಟೋಬರ್ 27ರಂದ್ ಭಾರತೀಯ ವಿದ್ಯಾಭವನ, ಮಡಿಕೇರಿಲಿ ಕನ್ನಡ ರಾಜ್ಯೋತ್ಸವದ ಲೆಕ್ಕಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಕನ್ನಡ ಚಲನಚಿತ್ರೋತ್ಸವನ ಇಟ್ಟ್‌ಕಂಡಿದ್ದ್ ಜೋಗಿವು ಕಥೆ ಬರ್ದ್, ಬಿ.ಎಸ್.ಲಿಂಗದೇವರು ನಿರ್ದೇಶಿಸಿದ 'ಕಾಡ ಬೆಳದಿಂಗಳು'ಂತೇಳುವ ಚಿತ್ರನ ಪ್ರದರ್ಶಿಸಿದೊ.

9. ಅಕ್ಟೋಬರ್ 28ರಂದ್ ಸರ್ಕಾರಿ ಪ್ರಥಮ ದರ್ಜೆ ಕಾಲೇಜ್, ಬೆಟ್ಟಂಪಾಡಿಲಿ ಕನ್ನಡ ರಾಜ್ಯೋತ್ಸವದ ಲೆಕ್ಕಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ

ಅಕಾಡೆಮಿ ಕನ್ನಡ ಚಲನಚಿತ್ರೋತ್ಸವನ ಇಟ್ಟ್‌ಕಂಡಿದ್ದ್, ನಾ ಡಿಸೋಜವು ಕಥೆ ಬರ್ದ್, ಗಿರೀಶ್ ಕಾಸರವಳ್ಳಿಯವು ನಿರ್ದೇಶಿಸಿದ 'ದ್ವೀಪ'ಂತೇಳುವ ಚಿತ್ರನ ಪ್ರದರ್ಶಿಸಿದೊ.

10. ಅಕ್ಟೋಬರ್ 29ರಂದ್ ಸಂತ ಅಲೋಶಿಯಸ್ ಕಾಲೇಜ್, ಮಂಗಳೂರುಲಿ ಕನ್ನಡ ರಾಜ್ಯೋತ್ಸವದ ಲೆಕ್ಕಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಕನ್ನಡ ಚಲನಚಿತ್ರೋತ್ಸವನ ಇಟ್ಟ್‌ಕಂಡಿದ್ದ್, ಬಿ.ಎಸ್.ಲಿಂಗದೇವರು ಕಥೆ ಬರ್ದ್ ನಿರ್ದೇಶಿಸಿದ 'ನಾನು ಅವನಲ್ಲ, ಅವಳು'ಂತೇಳುವ ಚಿತ್ರನ ಪ್ರದರ್ಶಿಸಿದೊ.

11. ಅಕ್ಟೋಬರ್ 30ರಂದ್ ವಿವೇಕಾನಂದ ಕಾಲೇಜು, ಪುತ್ತೂರುಲಿ ಕನ್ನಡ ರಾಜ್ಯೋತ್ಸವದ ಲೆಕ್ಕಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಕನ್ನಡ ಚಲನಚಿತ್ರೋತ್ಸವನ ಇಟ್ಟ್‌ಕಂಡಿದ್ದ್, ನಾಗತೀಹಳ್ಳಿ ಚಂದ್ರಶೇಖರ್ ಕಥೆ ಬರ್ದ್ ಬಿ.ಸುರೇಶ್‌ವು ನಿರ್ದೇಶಿಸಿದ 'ಪುಟ್ಟಕ್ಕನ ಹೈವೇ'ಂತೇಳುವ ಚಿತ್ರನ ಪ್ರದರ್ಶಿಸಿದೊ.

12. ಅಕ್ಟೋಬರ್ 31ರಂದ್ ಗುಡ್ಡೆಮನೆ ಅಪ್ಪಯ್ಯಗೌಡರ ಸ್ಮಾರಕ. ಸುದರ್ಶನ ವೃತ್ತ, ಮಡಿಕೇರಿಲಿ ಸ್ವಾತಂತ್ರ್ಯ ಹೋರಾಟಗಾರ ಸುಬೇದಾರ್ ಗುಡ್ಡೆಮನೆ ಅಪ್ಪಯ್ಯಗೌಡರ ಹುತಾತ್ಮ ದಿನಾಚರಣೆ ಮತ್ತೆ ಸ್ವಾತಂತ್ರ್ಯದ ಅಮೃತ ಮಹೋತ್ಸವ ವರ್ಷದ ಪ್ರಯುಕ್ತ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಪ್ರಾಯೋಜಿಕತ್ವದಲಿ ಸುಬೇದಾರ್ ಗುಡ್ಡೆಮನೆ ಅಪ್ಪಯ್ಯ ಗೌಡರ ಸ್ಮರಣಾರ್ಥ ವಿಶೇಷ ಅಂಚೆ ಲಕೋಟೆನ ಭಾರತೀಯ ಅಂಚೆ ಇಲಾಖೆಂದ ಬಿಡುಗಡೆ ಮಾಡ್ದೊ.

13. ಡಿಸಂಬರ್ 15ರಂದ್ ಮರಗೋಡು ಗೌಡ ಸಮಾಜ, ಪಿರಿಯಾಪಟ್ಟಣ ಗೌಡ ಸಮಾಜ, ಆಲೂರು ಸಿದ್ದಾಪುರ ಗೌಡ ಸಮಾಜ, ಉಜಿರೆನ ಪ್ರಗತಿ ಮಹಿಳಾ ಮಂಡಲ, ಕೊಡಗು ಗೌಡ ಸಮಾಜ ಬೆಂಗಳೂರು, ಬೆಂಗಳೂರುನ ಲಗ್ಗೆರೆ ನಮ್ಮನೆ ಸಾಂಸ್ಕೃತಿಕ ಕಲಾ ಕೇಂದ್ರ, ಭಾಗಮಂಡಲ ಗೌಡ ಸಮಾಜ, ಭಾಗಮಂಡಲ ನಾಡು ಗೌಡ ಯುವ ಒಕ್ಕೂಟ, ದೇವಸ್ತೂರುನ ಶಾಂಗ್ರಿಲಾ ಹೋಂಸ್ಟೇ, ಐಗೂರು ಗೌಡ ಸಮಾಜ, ಕುಶಾಲನಗರ ಗೌಡ ಸಮಾಜ, ಮೈಸೂರುನ ಕೊಡಗು ಗೌಡ ಸಮಾಜ, ಕೆ.ಎಸ್. ಎಸ್.ಕಾಲೇಜ್,ಸುಬ್ರಹ್ಮಣ್ಯ, ನೆಹರೂ ಮೆಮೋರಿಯಲ್ ಕಾಲೇಜ್, ಸುಳ್ಯಲಿ ಅರೆಭಾಷೆ ದಿನಾಚರಣೆನ ಆಚರಿಸಿದೊ. ಭಾರತೀಯ ವಿದ್ಯಾಭವನ ಮಡಿಕೇರಿಲಿ ಅರೆಭಾಷೆ ದಿನಾಚರಣೆ ಲೆಕ್ಕಲಿ ಎನ್.ಎಸ್.ದೇವಿಪ್ರಸಾದ್‌ರ ಸಾಕ್ಷ್ಯಚಿತ್ರ ಪ್ರದರ್ಶನ ಮತ್ತೆ ಅರೆಭಾಷೆ ಸಾಂಸ್ಕ್ಕತಿಕ ಜಂಭರ ನಡ್ತ್. ತುಳು ಭವನ, ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಮಂಗಳೂರುಲಿ ಅರೆಭಾಷೆ ದಿನಾಚರಣೆನ ಲೆಕ್ಕಲಿ ವಾಲಿ ಮೋಕ್ಷ ಅರೆಭಾಷೆ ಯಕ್ಷಗಾನ ತಾಳಮದ್ದಳೆ ಪ್ರದರ್ಶನ ನಡ್ತ್. ಅಂಬಟೆಡ್ಕ ಸುಳ್ಯಲಿ ಅರೆಭಾಷೆ ದಿನಾಚರಣೆ ಲೆಕ್ಕಲಿ ವಾಲಿ ಮೋಕ್ಷ ಅರೆಭಾಷೆ ಯಕ್ಷಗಾನ ತಾಳಮದ್ದಳೆ ಪ್ರದರ್ಶನ ಮಾಡ್ದೊ.

# ಕರ್ನಾಟಕ ಅರೆಭಾಷೆ ಮತ್ತು ಸಾಹಿತ್ಯ ಅಕಾಡೆಮಿ

## ಅಧ್ಯಕ್ಷರು ಮತ್ತು ಸದಸ್ಯರ ವಿಳಾಸ

**ಅಧ್ಯಕ್ಷರು**
**ಶ್ರೀ ಲಕ್ಷ್ಮೀ ನಾರಾಯಣ ಕಜೆಗದ್ದೆ**
ಕನಕಮಜಲು ಅಂಚೆ,
ಸುಳ್ಯ ತಾಲೂಕು, ದ.ಕ 574223
ಮೊ.ನಂ 9449082249,
kajegadde@gmail.com

**ಸದಸ್ಯರು**
**ಶ್ರೀಮತಿ ಜಾನಕಿ ಬೈತಡ್ಕ**
#21–16. ರೇಸ್‌ಕೋರ್ಸ್ ರಸ್ತೆ,
ಎಲ್‌ಐಸಿ ಹತ್ತಿರ, ಮಡಿಕೇರಿ, ಕೊಡಗು.
ಮೊ ನಂ 9008571899

**ಶ್ರೀಮತಿ ಸ್ಮಿತಾ ಅಮೃತರಾಜ್**
'ಹಸಿರು'
ಬಾಲೆಂಬಿ ಅಂಚೆ, ಚೆಂಬು ಗ್ರಾಮ
ಮಡಿಕೇರಿ ತಾಲೂಕು
ಮೊ ನಂ 9980402968

**ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ**
ಟಿ.ಜಾನ್ ಲೇಔಟ್,
ಶಕ್ತಿ ಕ್ವಾಟ್ರಸ್
ಮಡಿಕೇರಿ
ಮೊ.ನಂ 9900992360

**ಶ್ರೀ ಎ.ಪಿ. ಧನಂಜಯ ಅಗೋಳಿಕಜೆ**
2ನೇ ಮೊಣ್ಣಂಗೇರಿ ಗ್ರಾಮ
ಮದೆ ಅಂಚೆ,
ಮಡಿಕೇರಿ ತಾಲೂಕು
ಮೊ ನಂ 9449731238

**ಶ್ರೀ ಆನಂದ ದಂಬೆಕೋಡಿ**
ಮೇಘಸಂದ್ಯೆ ಎಸ್ಟೇಟ್,
ಕತ್ತಲೆಕಾಡು ಗ್ರಾಮ,
ಕಡಗದಾಳು ಅಂಚೆ
ಮಡಿಕೇರಿ ತಾಲೂಕು
ಮೊ.ನಂ. : 9448141502

**ಡಾ. ದಯಾನಂದ ಕೂಡಕಂಡಿ**
ಬಿನ್. ಚಂದ್ರಹಾಸ ಕೆ.ಟಿ.
ತಾವೂರು ಗ್ರಾಮ, ಭಾಗಮಂಡಲ
ಮಡಿಕೇರಿ ತಾಲೂಕು
ಮೊ. ನಂ. : 9449766772
dayanandakudakandi@gmail.com

**ಶ್ರೀ ಕುಸುಮಾಧರ ಎ.ಟಿ.**
ಬಿನ್. ತ್ಯಾಂಪಣ್ಣಗೌಡ
ಅಳಿಕೆ ಮಜಲು ಮನೆ
ಕಾಯತ್ತೋರ್ಡಿ, ಸುಳ್ಯ
ಮೊ. ನಂ. : 7090133686

**ಡಾ. ವಿಶ್ವನಾಥ ಬದಿಕಾನ**
ಬಿನ್. ಹೂವಪ್ಪಗೌಡ ಬದಿಕಾನ
ನಂ. 9–88/9,
ಫ್ಲಾಟ್ ನಂ.. 407(34)
ಧ್ರುವ ರೆಸಿಡೆನ್ಸಿ, ಎಕ್ಕೂರು,
ಕಂಕನಾಡಿ –575002,
ಮಂಗಳೂರು, ದಕ್ಷಿಣ ಕನ್ನಡ
ಮೊ. ನಂ. : 9449615474

**ಶ್ರೀ ಜಯಪ್ರಕಾಶ್ ಮೋಂಟಡ್ಕ**
ಕೌಸ್ತುಭ ನಿಲಯ, ಬಿಳಿನೆಲೆ ಗ್ರಾಮ
ನೆಟ್ಟಣ ಅಂಚೆ, ಕಡಬ ತಾಲೂಕು
ದಕ್ಷಿಣ ಕನ್ನಡ–574 230
ಮೊ. ನಂ. : 9480293464
7406141591

**ಶ್ರೀ ಪುರುಷೋತ್ತಮ ಕಿರ್ಲಾಯ**
ಬಿನ್. ದೇವಣ್ಣ ಗೌಡ ಕೆ.
ಕಿರ್ಲಾಯ ಮನೆ
ಅರಂತೋಡು ಗ್ರಾಮ ಮತ್ತು ಅಂಚೆ
ಸುಳ್ಯ ತಾಲೂಕು, ದಕ್ಷಿಣ ಕನ್ನಡ
ಮೊ. ನಂ. : 9449770439

**ಡಾ. ಪುರುಷೋತ್ತಮ ಕೆ.ವಿ. ಕರಂಗಲ್ಲು**
'ಚಾಣಕ್ಯ'
ಸರಕಾರಿ ಪ್ರಥಮ ದರ್ಜೆ ಕಾಲೇಜು
ಮುಂಭಾಗ, ಗಾಂಧಿನಗರ,
ಕಾವೂರು,
ಮಂಗಳೂರು, ದ.ಕ–575015.
ಮೊಬೈಲ್ : 9448216070

**ಶ್ರೀ ಭರತೇಶ ಅಲಸಂಡೆಮಜಲು**
ಅಲಸಂಡೆಮಜಲು ಮನೆ
ಕೊಳ್ತಿಗೆ ಗ್ರಾಮ,
ಪುತ್ತೂರು ತಾಲೂಕು
ದಕ್ಷಿಣ ಕನ್ನಡ–574 212,
ಮೊ. ನಂ. : 9008027271

**ಶ್ರೀ ಕಿರಣ್ ಕುಂಬಳಚೇರಿ**
ಬಿನ್. ಕೇಶವ ಕೆ.ಎ. ಕುಂಬಳಚೇರಿ
ಮನೆಪೆರಾಜೆ ಗ್ರಾಮ ಮತ್ತು ಅಂಚೆ
ಮಡಿಕೇರಿ ತಾಲೂಕು,
ಕೊಡಗು ಜಿಲ್ಲೆ
ಮೊ. ನಂ. : 9164069225

ರಿಜಿಸ್ಟ್ರಾರ್
**ಶ್ರೀ ಚಿನ್ನಸ್ವಾಮಿ**
ಸಹಾಯಕ ನಿರ್ದೇಶಕರು
ವಾರ್ತಾ ಇಲಾಖೆ
ವಾರ್ತಾ ಭವನ, ಕೊಡಗು ಜಿಲ್ಲೆ
ಮಡಿಕೇರಿ
ಮೊ: 9945045327

ಅರ್ಥ ಸದಸ್ಯರು
**ಶ್ರೀಮತಿ ಕೆ.ಟಿ. ದರ್ಶನ**
ಸಹಾಯಕ ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಕೊಡಗು ಜಿಲ್ಲೆ, ಮಡಿಕೇರಿ
ಮೊ: 9483110593

# ಅಕಾಡೆಮಿದ್ ಪ್ರಕಟಣೆಗ

1 ಸರ್ಮಾಲೆ : ಎಂ.ಜಿ. ಕಾವೇರಮ್ಮ
2 ಅಜ್ಜಪ್ಪನ ಕತಾ ಭಂಡಾರಂದ ಹೆರ್ಕಿದ ಕತೆಗ : ಎಂ.ಜಿ. ಕಾವೇರಮ್ಮ
3 ಬೇರ್‌ಲಿ ಚಿಗ್‌ರ್ : ಬೈತಡ್ಕ ಜಾನಕಿ ಬೆಳ್ಯಪ್ಪ
4 ಕಂಕುಮ : ಪೂಜಾರೀರ ಜಿ. ಮಾದಪ್ಪ
5 ಬೊಲ್ಪಾಕನ ಮುಗ್ತ್ : ವಿದ್ವಾನ್ ಟಿ.ಜಿ. ಮುಡೂರು
6 ಬೇಟೆನ ಬಿರ್ಸ– ಬಡ್ಡಡ್ಕ ಅಪ್ಪಯ್ಯ ಗೌಡ್ರು : ವೇದಾವತಿ ಅನಂತ ಬಡ್ಡಡ್ಕ
7 ಬೆಳ್ಳಿಮುಷ್ಟಿ : ಕಟ್ರತನ ಕೆ. ಬೆಳ್ಯಪ್ಪ
8 ತೋರಣ : ಬಾರಿಯಂಡ ಆರ್. ಜೋಯಪ್ಪ
9 ಬೊಲ್ಪು : ಲೋಕೇಶ್ ಕುಂಚಡ್ಕ
10 ಮತ್ತೆ ಸಿಕ್ಕಿತ್ ಕುಂಕುಮ : ಕಟ್ರತನ ಲಲಿತ ಅಯ್ಯಣ್ಣ
11 ನೆಂಪುಗಳ ರಂಗೋಲಿ : ಎಂ.ಜಿ. ಕಾವೇರಮ್ಮ
12 ಹೊಸ ಬೊದ್ಕ್ : ಉದಯಕುಮಾರಿ ಚೆಂಬು
13 ಸಂಸ್ಕೃತಿ ಸಂಪತ್ತ್ : ಅರೆಭಾಷೆ ಸಂಸ್ಕೃತಿ ಪರಿಚಯ
14 ಬೆಳ್ಳಿ ಚುಕ್ಕೆಗ : ಬೈತಡ್ಕ ಜಾನಕಿ ಬೆಳ್ಯಪ್ಪ
15 ಅನುಭವ ಧಾರೆ : ಹೊದ್ದೆಟ್ಟಿ ಭವಾನಿಶಂಕರ
16 ರುಚಿ : ಅರೆಭಾಷೆ ಸಂಪ್ರದಾಯದ ಅಡಿಗೆ.
17 ಸಫಲ : ಅರೆಭಾಷೆ ಅಕಾಡೆಮಿಯ 2ನೇ ಸಮಿತಿಯ 3 ವರ್ಷಗಳ ಸಾಧನೆ
18 ಬದುಕು : ಎಂ.ಜಿ. ಕಾವೇರಮ್ಮ
19 ನೆಂಪುನ ಜೊಂಪೆ : ವಿನೋದ್ ಮೂಡಗದ್ದೆ
20 ಕಾಡ್‌ನ ಮಕ್ಕ : ಕೆ.ಆರ್. ತೇಜಕುಮಾರ್
21 ಅಪ್ಪ ಹೇಳ್ದ ಹತ್ತ್ ಕತೆಗ : ಭವಾನಿ ಶಂಕರ್ ಅಡ್ತಲೆ
22 ನೆಗೆ ಬೇಕ್ ಕೇದಗೆ ಗೊನೆ ಹಾಂಗೆ : ಡಾ॥ ಕರುಣಾಕರ ನಿಡಂಜಿ
23 ತಬ್ಲಿ ಮಂಜ : ಪಿ.ಜಿ. ಅಂಬೆಕಲ್
24 ಮಿಂಪುಳಿ : ಡಾ॥ ಪುನೀತ್ ರಾಘವೇಂದ್ರ ಕುಂಟುಕಾಡು
25 ಅರೆಬಾಸೆ ವ್ಯಾಕರಣ : ಪ್ರೊ. ಕೆ. ಕುಶಾಲಪ್ಪ ಗೌಡ
26 ಅಪೂರ್ವ ಸಂಗಮ : ಕಟ್ರತನ ಲಲಿತಾ ಅಯ್ಯಣ್ಣ
27 ಪುಂಸ್ತ್ರೀ (ಅರೆಭಾಷೆಗೆ ತರ್ಜುಮೆ) : ಎಂ.ಜಿ. ಕಾವೇರಮ್ಮ
28 ಕಲ್ಯಾಣಸ್ವಾಮಿ (ಅರೆಭಾಷೆಗೆ ತರ್ಜುಮೆ) : ಸಂಗೀತ ರವಿರಾಜ್
29 ಸಾಹೇಬ್ರು ಬಂದವೆ – ಅರೆಬಾಸೆ ರಂಗಪಯಣ
30 ಗಂಗಾವತರಣ – ಭೀಷ್ಮೋದಯ : ಪ್ರೊ. ಕೆ. ಕುಶಾಲಪ್ಪ ಗೌಡ
31 ಮುತ್ತುಮಣಿ – ಕಣಜಾಲ್ ಪೂವಯ್ಯ
32 ಬಲೀಂದ್ರನ ಸಂಧಿ (ಅರೆಭಾಷೆಗೆ ತರ್ಜುಮೆ) : ಕುಂಞೇಟಿ ಶಿವರಾಮ ಗೌಡ
33 ಯಾಕೀ ಕತೆ ಹೀಂಗಾತ್? : ಕುತ್ಯಾಳ ನಾಗಪ್ಪ ಗೌಡ (ಕಿರಣ)



ಕುಶಾಲನಗರಲಿ ಸಂಸ್ಕೃತಿ ಶಿಬಿರದ ಉದ್ಘಾಟನೆ



ಪಿರಿಯಾಪಟ್ಟಣಲಿ ಅರೆಭಾಷೆ ದಿನಾಚರಣೆ



ಪೈಲಾರುಲಿ ಸಂಸ್ಕೃತಿ ಶಿಬಿರದ ಉದ್ಘಾಟನೆ




ಮೂರ್ನಾಡ್‌ಲಿ ಅರೆಭಾಷೆ ದಿನಾಚರಣೆ




ಮಡಿಕೇರಿಲಿ ನಡ್ದ ಅರೆಭಾಷೆ ದಿನಾಚರಣೆ



ಭಾಗಮಂಡಲಲಿ ಅರೆಭಾಷೆ ದಿನಾಚರಣೆಯಂದ್ ಸನ್ಮಾನ



ಸುಬೇದಾರ್ ಗುಡ್ಡೆಮನೆ ಅಪ್ಪಯ್ಯಗೌಡರ ವಿಶೇಷ ಅಂಚೆಲಕೋಟೆ ಬಿಡುಗಡೆ



ಮೈಸೂರುಲಿ ಅರೆಭಾಷೆ ದಿನಾಚರಣೆ




ವಾಲಿ ಮೋಕ್ಷ ಅರೆಭಾಷೆ ಯಕ್ಷಗಾನ ತಾಳಮದ್ದಳೆ



ಸುಳ್ಯಲಿ ಅರೆಭಾಷೆ ದಿನಾಚರಣೆ

HINGARA AREBHASHE QUARTERLY VOLUME-4, ISSUE-8
DATE : 31-12-2021 KODAGU KARARB/2016/69571 PRICE : RS. 20/- PAGES : 80



ಸುಬೇದಾರ್ ಗುಡ್ಡೆಮನೆ ಅಪ್ಪಯ್ಯ ಗೌಡರ ಹುತಾತ್ಮ ದಿನಾಚರಣೆ



ಹುತಾತ್ಮ ದಿನಾಚರಣೆಯಂದ್ ಅಧ್ಯಕ್ಷರ್ ಮತ್ತೆ ಸದಸ್ಯರ್‌ಗ



ಸುಬೇದಾರ್ ಗುಡ್ಡೆಮನೆ ಅಪ್ಪಯ್ಯ ಗೌಡರ ಗಲ್ಲಿಗೇರಿಸಿದ ಜಾಗಲಿ ಗೌರವ ನಮನ



ಅರಂತೋಡುಲಿ ನಡ್ದ ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನೆ

Printed by **Chinnaswamy** on behalf of Registrar, **Karnataka Arebhase Samskruthi Mathu Sahitya Academy** and Published by **Chinnaswamy** on behalf of **Karnataka Arebhase Samskruthi Mathu Sahitya Academy** (name of owner) and Printed at **Aakrithi Prints,** Light House Hill Road, Mangaluru and Published at **Karnataka Arebhase Samskruthi Mathu Sahitya Academy,** Coffee Krupa Building, Ist Floor, Raja Seat Road, Madikeri, Kodagu District. Editor : **Dr. Dayananda Kudakandi**